CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಮೇ ೧೯, ೨೦೦೫ (ವೈಶಾಖ ೨೯ ಶಕ ವರ್ಷ ೧೯೨೭) | ಸಂಚಿಕೆ ೨೦ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಇಂಧನ ಸಚಿವಾಲಯ**
**ತಿದ್ದುಪಡಿ ಆದೇಶ**
**ಸಂಖ್ಯೆ: ಇಎನ್ 88 ಇಬಿಎಸ್ 99 (ಭಾ), ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2005**

**ವಿಷಯ:** ವಿದ್ಯುತ್ ಪರಿವೀಕ್ಷಣಾ ಇಲಾಖೆಯಲ್ಲಿ ಶೇಕಡ 80 ರಷ್ಟು ಹುದ್ದೆಗಳನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ಇಎನ್ 88 ಇಬಿಎಸ್ 99(ಭಾ) ದಿನಾಂಕ: 17.2.2005.

ದಿನಾಂಕ: 17.2.2005ರ ಸರ್ಕಾರಿ ಆದೇಶ ಸಂಖ್ಯೆ: ಇಎನ್ 88 ಇಬಿಎಸ್ 99(ಭಾ) ರಲ್ಲಿ ಬೆಂಗಳೂರಿನ ವಿದ್ಯುತ್ ಪರಿವೀಕ್ಷಣಾ ಇಲಾಖೆಯ ಕೇಂದ್ರ ಕಛೇರಿಯಲ್ಲಿ 2 ವಿದ್ಯುತ್ ಪರಿವೀಕ್ಷಕರ (ತಾಂತ್ರಿಕ ಮತ್ತು ಆಡಳಿತ, ತೆರಿಗೆ ಮತ್ತು ಮ್ಯಾನ್ಯುಯಲ್) ಹುದ್ದೆಗಳನ್ನು ರದ್ದುಗೊಳಿಸಿರುವುದನ್ನು ದಿನಾಂಕ: 17.2.2005 ರಿಂದಲೇ ಜಾರಿಗೆ ಬರುವಂತೆ ಹಿಂದಕ್ಕೆ ಪಡೆದು, ಸದರಿ ಹುದ್ದೆಗಳನ್ನು ಹಾಲಿ ಸ್ಥಳದಲ್ಲಿಯೇ ಮುಂದುವರಿಸಲಾಗಿದೆ.

ಈ ತಿದ್ದುಪಡಿ ಆದೇಶವನ್ನು ತಿದ್ದುಪಡಿ ಸಂಖ್ಯೆ ಸಿಆಸುಇ 6 ಈಸಪ 2004 ದಿನಾಂಕ: 14.3.2005 ರಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಾಧ್ಯಯನ 2) ಯು ನೀಡಿದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 458

**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**PERSONNEL AND ADMINISTRATIVE REFORMS SECRETARIAT**

**Sub:** Constitution of the Committee to make selection to IAS from State Civil Service and State Non Civil Service officers of Karnataka - Orders - reg.

**Read:** 1) Letter No. DPAR 217 SAS 2003 dated 30.7.2003.
2) Notification No. 14015/08/2001-AIS(I)-A dated 31.1.2005.

**Preamble:**

As per Regulation 3(1) of IAS (Appointment by Promotion) Regulations 1955 as amended prior to Notification read at Sl.No. (2) above, the Selection Committee for preparation of Select List of State Civil Service officers of Karnataka for promotion to the IAS consists of the following members.

| | |
|---|---|
| Chairman or Member of Union Public Service Commission | Chairman |
| Chief Secretary to Government | Member |
| Addl. Chief Secretary to Government | Member |
| Principal Secretary to Government, Revenue Department | Member |
| Senior most Divisional Commissioner | Member |
| Two nominees of Government of India not below the rank of Joint Secretary to Govt. of India | Member |

2. Further as per Regulation (2) (a) of the IAS (Appointment by Selection) Regulations 1997, the same Selection Committee shall prepare the list of non-State Civil Service officers also for appointment to IAS.

3. The State Government has abolished the posts/offices of Divisional Commissioner of all the four divisions in Karnataka. Consequent upon the abolition of the posts of Divisional Commissioners, proposals were sent to Govt. of India vide letter dated 30.7.2003 read at (1) above to delete the entry "Divisional Commissioner" from the schedule relating to constitution of Selection Committee under Rule 3(1) of IAS (Appointment by Promotion) Regulations in respect of Karnataka.

4. Govt. of India in their Notification dated 31.1.2005 read at (2) above have issued an amendment to the IAS (Appointment by Promotion) Regulations. As per the amended Regulations, the composition of the Selection Committee in respect of Karnataka and some other States is substituted by the following:

a) Chief Secretary of the State Government;
b) The Senior most officer of the cadre serving in the State, other than the Chief Secretary;
c) Head of General Administration Department/Personnel/Revenue Department of the State Government not below the rank of Secretary to the State Government;
d) Two nominees of Govt. of India not below the rank of Joint Secretary.

5. In view of the above and after examination of the matter, the following orders are issued.

**Government Order No. DPAR 217 SAS 2003 Bangalore, dated 23rd March 2005**

6. In pursuance of Government of India Notification read at Sl.No. (2) above, the Government of Karnataka are pleased to constitute the Selection Committee consisting of the following for preparation of select list of State Civil Service officers of Karnataka as well as Non State Civil Service officers of Karnataka for promotion/selection to the IAS under IAS (Appointment by Promotion) Regulations and the IAS (Appointment by election) Regulations, respectively.

| | |
|---|---|
| a. Chairman or Member of Union Public Service Commission | Chairman |
| b. Chief Secretary to Government | Member |
| c. Addl. Chief Secretary to Government | Member |
| d. Principal Secretary to Government, DP & AR | Member |
| e. Two nominees of Government of India not below the rank of Joint Secretary to Govt. of India | Member |

7. This order shall come into force with immediate effect and will remain in force until further orders.

By Order and in the name of the Governor of Karnataka,

PR-440

**K. Sudhakara Shetty**

Under Secretary to Government, DPAR (Services-I).

## ENERGY SECRETARIAT

**Sub:** Transfer of 0.8 M.W. Wind Power Capacity in favour of M/s. CBM Corporation - Orders relating to:

**Read:**
1) Government Order No. DE 26 NCE 1999, dated 13.5.1999.
2) Government Order No. EN 78 NCE 2005, dated 17.3.2005.
3) Letter No. KRED/08/EBM/2005/548, dated 18/22.3.2005 received from the MD, KREDL, Bangalore.

**Preamble:**

In the Government Order dated 17.3.2005 read at (2) above, sanction has been accorded for implementation of 9.6 M.W. capacity Wind Power Project at Borenahalli & Mathigatta village, Chitradurga District to M/s. Mysore Mercantile Company Limited.

Now, the Managing Director, Karnataka Renewable Energy Development Limited, Bangalore in his letter dated 18/22.3.2005 read at (3) above, has recommended to the Government for transfer of 0.8 M.W. Wind Power capacity in favour of M/s. CBM Corporation, Hubli at Mathigatta village, Holalkere Taluk, Chitradurga District from out of the sanctioned 9.6 M.W. capacity of M/s. Mysore Mercantile Company Limited.

The proposal has been examined and pass the following order:

**Government Order No. EN 82 NCE 2005, Bangalore, dated 23rd March 2005**

Government are pleased to accord sanction for transfer of 0.8 M.W. Wind Power capacity in favour of M/s. CBM Corporation Hubli, at Mathigatta village Holalkere Taluk, Chitradurga District. From out of 9.6 M.W. capacity of M/s. Mysore Mercantile Company Limited allotted in the Government Order dated 17.3.2005.

The terms and conditions of the Government Order read at (1) above, shall **IPSO FACTO** applicable.

By Order and in the name of the Governor of Karnataka,

PR-454

**Suresh B. Krishnappanavar,**

Under Secretary to Government,

Energy Department.

**CORRIGENDUM**

**No. EN 123 PSR 2005, Bangalore, dated 23rd March 2005**

In the Government Order No. EN 123 PSR 2004, dated 16.2.2005 sanctioning pensionary benefits to Sri Phillipose Mathai, retired Chairman, Karnataka Electricity Regulatory Commission for the words and figures "Leave Encashment" Rs. 91.347/- (Rs. Ninety one thousand three hundred forty seven only" appearing in the order portion of the said Government order shall be read as "Leave Encashment" Rs. 1.20,813/- (Rs. One lakh Twenty thousand eight hundred thirteen only.

By Order and in the name of the Governor of Karnataka,

PR-455

**Suresh B. Krishnappanavar,**

Under Secretary to Government,

Energy Department.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಬೆಂಗಳೂರಿನ ಸರ್ಕಾರಿ ಹೋಮಿಯೋಪತಿ ಮಹಾವಿದ್ಯಾಲಯದ ಕಟ್ಟಡ ಕಾಮಗಾರಿಯನ್ನು ಕರ್ನಾಟಕ ಭೂ ಸೇನಾ ನಿಗಮಕ್ಕೆ ವಹಿಸಿಕೊಡಲು ಸರ್ಕಾರದ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**
1) ಭಾರತ ಸರ್ಕಾರದ ಪತ್ರ ಸಂಖ್ಯೆ: ಜಡ್ : 15011 : 35 : 2004 : ಇ ಅಂಡ್ ಸಿ, ದಿನಾಂಕ: 30.9.2004.
2) ಸರ್ಕಾರದ ಆದೇಶ ಸಂಖ್ಯೆ: ಆಕುಕ 696 ಪಿಟಿಡಿ 2004, ದಿನಾಂಕ: 4.3.2005.
3) ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಭಾವೈಪ : 19 : ಸಿಎಸ್ಎಸ್ : 2004 - 2005, ದಿನಾಂಕ: 7.3.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ಭಾರತ ಸರ್ಕಾರದ ಪತ್ರ ದಿನಾಂಕ: 30.9.2004 ರಲ್ಲಿ ಬೆಂಗಳೂರಿನ ಸರ್ಕಾರಿ ಹೋಮಿಯೋಪತಿ ವೈದ್ಯಕೀಯ ಕಾಲೇಜಿನ ಕಟ್ಟಡದ ಕಾಮಗಾರಿಗಾಗಿ ರೂ. 50.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ರ ಸರ್ಕಾರದ ಆದೇಶ ದಿನಾಂಕ: 4.3.2005 ಸರ್ಕಾರಿ ಹೋಮಿಯೋಪತಿ ವೈದ್ಯಕೀಯ ಕಾಲೇಜು, ಬೆಂಗಳೂರು ಇಲ್ಲಿಗೆ ಕಾಲೇಜಿನ ಕಟ್ಟಡ ಕಾಮಗಾರಿಗೆ, ಉಪಕರಣ ಮತ್ತು ಲೈಬ್ರರಿ ಪುಸ್ತಕಕ್ಕೆ ಭಾರತ ಸರ್ಕಾರ ಬಿಡುಗಡೆ ಮಾಡಿರುವ ಹಣದಲ್ಲಿ ಒಟ್ಟು ರೂ. 37.00 ಲಕ್ಷಗಳನ್ನು ಬಿಡುಗಡೆ ಮಾಡಲು ಸರ್ಕಾರ ಮಂಜೂರಾತಿ ನೀಡಿದ್ದು, ಇದರಲ್ಲಿ ಸರ್ಕಾರಿ ಹೋಮಿಯೋಪತಿ ವೈದ್ಯಕೀಯ ಕಾಲೇಜು, ಬೆಂಗಳೂರು ಇಲ್ಲಿನ ಕಟ್ಟಡ ಕಾಮಗಾರಿಗೆ ರೂ. 25.00 ಲಕ್ಷಗಳ ಅನುದಾನವನ್ನು ಕೇಂದ್ರ ಸರ್ಕಾರ ಬಿಡುಗಡೆ ಮಾಡಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (3) ರ ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ, ಬೆಂಗಳೂರು ಇವರ ಪತ್ರದಲ್ಲಿ ಬೆಂಗಳೂರಿನ ಸರ್ಕಾರಿ ಹೋಮಿಯೋಪತಿ ವೈದ್ಯಕೀಯ ಮಹಾವಿದ್ಯಾಲಯದ ಕಟ್ಟಡ ಕಾಮಗಾರಿಗೆ ಪ್ರಸಕ್ತ ಸಾಲಿಗೆ ರೂ. 25.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದ್ದು, ಸರ್ಕಾರದ ಆದೇಶ ಸಂಖ್ಯೆ: ಆಕುಕ 285 ಪಿಐಎಂ 99, ದಿನಾಂಕ: 14.3.2001 ರ ಆದೇಶದಲ್ಲಿ ಕಟ್ಟಡದ ಕಾಮಗಾರಿಯನ್ನು ಕರ್ನಾಟಕ ಭೂ ಸೇನಾ ನಿಗಮಕ್ಕೆ ವಹಿಸಿಕೊಟ್ಟಿದ್ದು, ಅದರಂತೆ ಕೇಂದ್ರ ಸರ್ಕಾರವು ಕಟ್ಟಡ ಕಾಮಗಾರಿಗೆ ಬಿಡುಗಡೆ ಮಾಡಲಾಗಿರುವ ರೂ. 25.00 ಲಕ್ಷಗಳನ್ನು ಕರ್ನಾಟಕ ಭೂ ಸೇನಾ ನಿಗಮಕ್ಕೆ ಪೇಯೀಸ್ ರಶೀದಿಯ (ಸ್ವೀಕೃತ ರಶೀದಿ) ಮುಖಾಂತರ ರಾಜ್ಯ ಹುಜೂರ್ ಖಜಾನೆಯಿಂದ ಚೆಕ್ ಪಡೆದು ಪಾವತಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲು ನಿರ್ದೇಶಕರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 696 ಪಿಟಿಡಿ 2004, ಬೆಂಗಳೂರು, ದಿನಾಂಕ: 28ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ಹೇಳಲಾದ ಅಂಶಗಳನ್ನು ಪರಿಗಣಿಸಿ, ಸರ್ಕಾರದ ಆದೇಶ ಸಂಖ್ಯೆ: ಆಕುಕ 696 ಪಿಟಿಡಿ 2004, ದಿನಾಂಕ: 4.3.2005 ನ್ನು ಬಹುಶಃ ಮಾರ್ಪಡಿಸಿ ಬೆಂಗಳೂರಿನ ಸರ್ಕಾರಿ ಹೋಮಿಯೋಪತಿ ವೈದ್ಯಕೀಯ ಕಾಲೇಜಿಗೆ ಬಿಡುಗಡೆ ಮಾಡಿರುವ ರೂ. 37.00 ಲಕ್ಷಗಳಲ್ಲಿ, ರೂ. 25.00 ಲಕ್ಷಗಳನ್ನು (ಇಪ್ಪತ್ತೈದು ಲಕ್ಷ ರೂಪಾಯಿಗಳು ಮಾತ್ರ) ಪೇಯೀಸ್ ರಶೀದಿಯ ಮೂಲಕ ಡ್ರಾ ಮಾಡಿ ಕರ್ನಾಟಕ ಭೂ ಸೇನಾ ನಿಗಮ, ಬೆಂಗಳೂರು ಇವರಿಗೆ ಪಾವತಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ : 549 : ವೆಚ್ಚ-5 : 2005, ದಿನಾಂಕ: 24.3.2005ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 462

**ಚೋಮನಾಯಕ್. ಜಿ.**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** 2005ನೇ ರಾಜ್ಯಮಟ್ಟದ ಅರ್ಹತಾ ಪರೀಕ್ಷೆ State Level Eligibility Test (SLET) ಪರೀಕ್ಷೆಗಳನ್ನು ನಡೆಸಲು ರಾಜ್ಯ ಮಟ್ಟದ ಸಮಿತಿಗೆ ಅಧಿಕಾರ ನೀಡುವ ಕುರಿತು.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಡಿ 39 ಡಿಸಿಇ 99(2) ದಿನಾಂಕ: 24.2.1999.
2) ಯುಜಿಸಿ-ಎನ್‌ಇಟಿ / ಬ್ಯೂರೊ, ನವದೆಹಲಿಯ ಜಂಟಿ ಕಾರ್ಯದರ್ಶಿಯವರ ಪತ್ರ ಸಂಖ್ಯೆ: ಎಫ್ 17-1/2005 (ಎನ್‌ಇಟಿ) ದಿನಾಂಕ: 1.2.2005 ರ ಪತ್ರ.
3) ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ: ಕಾಶಿಆ-1-ಎನ್ಎಲ್‌ಇಟಿ-2005 ದಿನಾಂಕ: 5.3.2005.
4) ಕುವೆಂಪು ವಿಶ್ವವಿದ್ಯಾನಿಲಯ, ಶಿವಮೊಗ್ಗ ರಿಜಿಸ್ಟ್ರಾರ್ ರವರ ಪತ್ರ ಸಂಖ್ಯೆ: ಕೆಯು/ಇಬಿ/ಪಿಎ/13763/2005 ದಿನಾಂಕ: 5.2.2005.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ದಿನಾಂಕ: 24.2.1999ರ ಸರ್ಕಾರಿ ಆದೇಶದಲ್ಲಿ 1999ನೇ ಸಾಲಿನ ರಾಜ್ಯಮಟ್ಟದ ರಾಷ್ಟ್ರೀಯ ಅರ್ಹತಾ ಪರೀಕ್ಷೆಗಳನ್ನು ಜರುಗಿಸಲು ಬೆಂಗಳೂರು ವಿಶ್ವವಿದ್ಯಾನಿಲಯದ ಉಪ ಕುಲಪತಿಗಳ ಅಧ್ಯಕ್ಷತೆಯಲ್ಲಿ ಜರುಗಿಸಲು ಆದೇಶಿಸಲಾಗಿತ್ತು. ಮೇಲೆ ಕ್ರಮಾಂಕ (3) ರಲ್ಲಿ ಓದಲಾದ ದಿನಾಂಕ: 5.3.2005ರ ಪತ್ರದಲ್ಲಿ ಕಾಲೇಜು ಶಿಕ್ಷಣ ಆಯುಕ್ತರು, ಬೆಂಗಳೂರು ಇವರು 2005ನೇ ಸಾಲಿಗೆ ರಾಜ್ಯಮಟ್ಟದ ಅರ್ಹತಾ ಪರೀಕ್ಷೆಯನ್ನು ನಡೆಸಲು ಶಿವಮೊಗ್ಗದಲ್ಲಿನ ಕುವೆಂಪು ವಿಶ್ವವಿದ್ಯಾಲಯದ ಉಪ ಕುಲಪತಿಗಳ ಅಧ್ಯಕ್ಷತೆಯಲ್ಲಿ ನಡೆಸಲು ಅಧಿಕಾರ ನೀಡಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಕ್ರಮಾಂಕ (4) ರಲ್ಲಿ ದಿನಾಂಕ: 5.2.2005ರ ಪತ್ರದಲ್ಲಿ ಕುವೆಂಪು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್ ರವರು 2005ನೇ ಸಾಲಿನ ಅರ್ಹತಾ ಪರೀಕ್ಷೆಗಳನ್ನು ನಡೆಸಲು ಒಪ್ಪಿಗೆ ನೀಡಿರುತ್ತಾರೆ.

ಕಾಲೇಜು ಶಿಕ್ಷಣ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 131 ಡಿಸಿಇ 2004, ಬೆಂಗಳೂರು, ದಿನಾಂಕ: 19ನೇ ಮಾರ್ಚ್ 2005**

2005ನೇ ಸಾಲಿನ ರಾಜ್ಯ ಮಟ್ಟದ ಅರ್ಹತಾ ಪರೀಕ್ಷೆಯನ್ನು State Level Eligibility Test (SLET) ನ್ನು ಜರುಗಿಸಲು ಶಿವಮೊಗ್ಗದಲ್ಲಿನ ಕುವೆಂಪು ವಿಶ್ವವಿದ್ಯಾಲಯವನ್ನು ಗುರುತಿಸಿದೆ. ಹಾಗೂ ಕುವೆಂಪು ವಿಶ್ವವಿದ್ಯಾಲಯ ಉಪ ಕುಲಪತಿಗಳ ಅಧ್ಯಕ್ಷತೆಯಲ್ಲಿ 2005ನೇ ಸಾಲಿನ ರಾಜ್ಯ ಮಟ್ಟದ ಅರ್ಹತಾ ಪರೀಕ್ಷೆಯನ್ನು State Level Eligibility Test (SLET) ನ್ನು ಜರುಗಿಸಲು ಅವರಿಗೆ ಅಧಿಕಾರ ನೀಡಿ ಆದೇಶಿಸಲಾಗಿದೆ. ರಾಜ್ಯಮಟ್ಟದ ಅರ್ಹತಾ ಪರೀಕ್ಷೆಯು ಯು.ಜಿ.ಸಿ. ಹೊರಡಿಸಿರುವ ಮಾರ್ಗಸೂಚಿಗಳಿಗೆ ಅನುಗುಣವಾಗಿರತಕ್ಕದ್ದು.

ವಿಶ್ವವಿದ್ಯಾನಿಲಯ ಧನ ಸಹಾಯ ಆಯೋಗವು (ಯು.ಜಿ.ಸಿ.) ಹೊರಡಿಸಿರುವ ಮಾರ್ಗಸೂಚಿಗಳ ಕಂಡಿಕೆ 4.1ರ ಸದ್ಗುಣದಡಿಯಲ್ಲಿ ಈ ಕೆಳಕಂಡ ಸಮಿತಿಗಳನ್ನು ರಚಿಸಿ ಆದೇಶಿಸಲಾಗಿದೆ.

**1. ಪರಿಶೀಲನಾ ಮತ್ತು ಸಲಹಾ ಸಮಿತಿ - steering / advisory committee**

| | | |
|---|---|---|
| 1 | ಅಧ್ಯಕ್ಷರು | ಕುಲಪತಿಗಳು, ಕುವೆಂಪು ವಿಶ್ವವಿದ್ಯಾನಿಲಯ, |
| 2 | ಸದಸ್ಯರು | ರಾಜ್ಯದಲ್ಲಿನ ವಿಶ್ವವಿದ್ಯಾನಿಲಯಗಳ ಇಬ್ಬರು ಕುಲಪತಿಗಳು (ಗುಲ್ಬರ್ಗಾ ಮತ್ತು ಮಂಗಳೂರು ವಿಶ್ವವಿದ್ಯಾನಿಲಯ) |
| 3 | ಸದಸ್ಯ ಕಾರ್ಯದರ್ಶಿ | ಕುಲಸಚಿವರು (ರಿಜಿಸ್ಟ್ರಾರ್) ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ |
| 4 | ಇಬ್ಬರು ಶಿಕ್ಷಣ ತಜ್ಞರು | ಪ್ರೊಫೆಸರ್ ಹುದ್ದೆಗೆ ಕಡಿಮೆ ಇಲ್ಲದ ವಿಜ್ಞಾನ ಮತ್ತು ಕಲಾ ವಿಭಾಗದಿಂದ ತಲಾ ಒಬ್ಬರು (1) (ವಿಜ್ಞಾನ ವಿಭಾಗಕ್ಕೆ ಬೆಂಗಳೂರು ವಿಶ್ವವಿದ್ಯಾನಿಲಯದ ಡಾ: ರವಿಚಂದ್ರರೆಡ್ಡಿ, ಪ್ರೊಫೆಸರ್, ಪ್ರಾಣಿಶಾಸ್ತ್ರ ವಿಭಾಗ) ಮತ್ತು (2) (ಕಲಾ ವಿಭಾಗಕ್ಕೆ ಪ್ರೊ: ಮುರುಗಪ್ಪ, ಪ್ರೊಫೆಸರ್, ಕನ್ನಡ ವಿಭಾಗ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ) |

ಯು.ಜಿ.ಸಿ. ಮಾರ್ಗಸೂಚಿಗಳನ್ವಯ ಪರಿಶೀಲನಾ ಸಮಿತಿಯ ಅಧ್ಯಕ್ಷರು ನಾಮನಿರ್ದೇಶನ ಅಥವಾ ಶಿಫಾರಸ್ಸು ಮಾಡುವ ವ್ಯಕ್ತಿಗಳು ಸಮಿತಿಯ ಇತರೆ ಸದಸ್ಯರಾಗುತ್ತಾರೆ.

**2. ಸಮನ್ವಯ ಮತ್ತು ಅನುಷ್ಠಾನ ಸಮಿತಿ (co-ordination / implementation committee)**

1. ಅಧ್ಯಕ್ಷರು - ಪರಿಶೀಲನಾ ಮತ್ತು ಸಲಹಾ ಸಮಿತಿಯ ನಾಮಕರಣ ಮಾಡಿದ ಮತ್ತು ಸದರಿ ಸಮಿತಿಯ ಪದನಿಮಿತ್ತ ಸದಸ್ಯರೊಬ್ಬರು.
2. ಸದಸ್ಯ ಕಾರ್ಯದರ್ಶಿ, ಕುಲಸಚಿವರು, ಕುವೆಂಪು ವಿಶ್ವವಿದ್ಯಾಲಯ
3. ರಾಜ್ಯದಲ್ಲಿನ ವಿಶ್ವವಿದ್ಯಾನಿಲಯದ ಕುಲಪತಿಗಳಿಂದ ನಾಮಕರಣ ಮಾಡಲ್ಪಟ್ಟ ಪ್ರೊಫೆಸರ್ ಹುದ್ದೆಗೆ ಕಡಿಮೆಯಿಲ್ಲದ ಇಬ್ಬರು ಶಿಕ್ಷಣ ಪರಿಣಿತರು
4. ಸರ್ಕಾರದ ಉಪ ಕಾರ್ಯದರ್ಶಿ-4, ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ)

**3. ಮಾಡರೇಷನ್ ಸಮಿತಿ (moderation committee)**

1. ಅಧ್ಯಕ್ಷರು - ಕುಲಪತಿಗಳು, ಕುವೆಂಪು ವಿಶ್ವವಿದ್ಯಾನಿಲಯ, ಶಿವಮೊಗ್ಗ
2. ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು (ರಾಜ್ಯ ಸರ್ಕಾರದ ಪ್ರತಿನಿಧಿ)
3. ರಾಜ್ಯದ ಬೇರೆ ವಿಶ್ವವಿದ್ಯಾನಿಲಯ ಇಬ್ಬರು ಪ್ರೊಫೆಸರ್‌ಗಳು ಅಂದರೆ,
   1. ಶ್ರೀ ಕೆ. ಈರೇಶಿ, ಪ್ರೊಫೆಸರ್, ವಾಣಿಜ್ಯಶಾಸ್ತ್ರ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.
   2. ಶ್ರೀ ವೈ.ಎಫ್. ನೀಲಗುಂದ, ಪ್ರೊಫೆಸರ್, ಸೂಕ್ಷ್ಮ ಜೀವಾಣಶಾಸ್ತ್ರ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ.
4. ಕುವೆಂಪು ವಿಶ್ವವಿದ್ಯಾನಿಲಯದ ಕುಲಪತಿಯವರು ನಾಮನಿರ್ದೇಶನ ಮಾಡುವ ಹೊರ ರಾಜ್ಯದ ಒಬ್ಬ ಪ್ರೊಫೆಸರ್
5. ಸದಸ್ಯ ಕಾರ್ಯದರ್ಶಿ - ಕುಲಸಚಿವರು, ಕುವೆಂಪು ವಿಶ್ವವಿದ್ಯಾನಿಲಯ
6. ವಿಶ್ವವಿದ್ಯಾಲಯ ಧನಸಹಾಯ ಆಯೋಗದ ನಾಮನಿರ್ದೇಶನ ಹೊಂದಿದವರು
7. ಸದಸ್ಯ ಕಾರ್ಯದರ್ಶಿ - ವಿಶ್ವವಿದ್ಯಾಲಯ ಧನಸಹಾಯ ಆಯೋಗದ ಅಧಿಕಾರಿಗಳು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 468

**ಮೇರಿ ಜಾಯ್ಸ್**

ಸರ್ಕಾರದ ಉಪ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ)

**ವಿಷಯ:** 2005-2006ನೇ ಶೈಕ್ಷಣಿಕ ಸಾಲಿಗೆ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣದ ನಿರ್ಧರಣೆ.

**ಓದಲಾಗಿದೆ:** ದಿನಾಂಕ: 24.2.2005 ಸಂ. F.SRO/NCTE/2004-05/895ರ NCTE ಯ ಪ್ರಾದೇಶಿಕ ನಿರ್ದೇಶಕರ ಪತ್ರ.

**ಪೀಠಿಕೆ:**

1) ಸರ್ಕಾರಿ / ವಿಶ್ವವಿದ್ಯಾಲಯ / ಅನುದಾನಿತ / ಖಾಸಗಿ ದೈಹಿಕ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಪಿ.ಇಡಿ ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್‌ಸಿಟಿಇ ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿಇಡಿ ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ. ಅದರಂತೆ ದಿನಾಂಕ: 24.2.2005ರ ಪತ್ರದಲ್ಲಿ NCTE-SRC ಯು ಪ್ರಾದೇಶಿಕ ನಿರ್ದೇಶಕರ ಪತ್ರದಲ್ಲಿ 2004-2005ನೇ ಶೈಕ್ಷಣಿಕ ಸಾಲಿಗೆ ಹೊಸದಾಗಿ ಬಿ.ಪಿ.ಇಡಿ ಕಾಲೇಜುಗಳನ್ನು ಚಿಕ್ಕೋಡಿ ಮತ್ತು ಹಾರೋಗೇರಿಯಲ್ಲಿ ಸಂಬಂಧಪಟ್ಟ ವಿದ್ಯಾ ಸಂಸ್ಥೆಯಿಂದ ತೆರೆಯಲು ಮಾನ್ಯತೆ ನೀಡಿರುವ ಹಿನ್ನೆಲೆಯಲ್ಲಿ ಈ ಪ್ರಕರಣವನ್ನು ಸಂವೀಕ್ಷಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 123 ಯುಆರ್‌ಸಿ 2005, ಬೆಂಗಳೂರು, ದಿನಾಂಕ: 17ನೇ ಮಾರ್ಚ್ 2005**

2) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್ ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರಿ / ವಿಶ್ವವಿದ್ಯಾಲಯ / ಅನುದಾನಿತ ಮತ್ತು ಖಾಸಗಿ ದೈಹಿಕ ಶಿಕ್ಷಣ ಕಾಲೇಜುಗಳಲ್ಲಿ ನಡೆಸುತ್ತಿರುವ ಬಿ.ಪಿ.ಇಡಿ ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು 2005-2006ನೇ ಶೈಕ್ಷಣಿಕ ಸಾಲಿಗೆ ಅನುವಾಗುವಂತೆ ಈ ಕೆಳಕಂಡ ಕಾಲೇಜುಗಳಿಗೆ ಅವುಗಳ ಮುಂದೆ ತೋರಿಸಲಾದ ವಿದ್ಯಾರ್ಥಿ ಪ್ರಮಾಣದಂತೆ ನಿಗದಿಗೊಳಿಸಲಾಗಿದೆ ಮತ್ತು ಈ ವಿದ್ಯಾರ್ಥಿ ಪ್ರಮಾಣದ ನಿರ್ಧರಣೆಯು ಈ ಕೆಳಕಂಡ ಷರತ್ತುಗಳಿಗೊಳಪಟ್ಟಿರುತ್ತದೆ.

| ಕ್ರ.ಸಂ. | ಕಾಲೇಜಿನ ಹೆಸರು | ವಿದ್ಯಾರ್ಥಿ ಪ್ರಮಾಣ |
|---|---|---|
| 1 | ಚಿಕ್ಕೋಡಿ ತಾಲ್ಲೂಕು ಎಜುಕೇಷನ್ ಸೊಸೈಟೀಸ್ ಕಾಲೇಜ್ ಆಫ್ ಫಿಜಿಕಲ್ ಎಜುಕೇಷನ್ ಕೇರಾಫ್ ಆರ್.ಡಿ. ಕಾಂಪೋಜಿಟ್ ಪಿಯು ಕಾಲೇಜ್ ಕ್ಯಾಂಪಸ್, ಚಿಕ್ಕೋಡಿ ತಾಲ್ಲೂಕ್, ಬೆಳಗಾಂ ಜಿಲ್ಲೆ | 50 (ಐವತ್ತು) |
| 2 | ಶ್ರೀ ವಾಲ್ಮೀಕಿ ಎಜುಕೇಷನ್ ಸೊಸೈಟಿ ಬಿ.ಪಿ.ಎಡ್. ಕಾಲೇಜ್, ಹಾರೋಗೇರಿ, ರಾಯಬಾಗ್ ತಾಲ್ಲೂಕು, ಬೆಳಗಾಂ ಜಿಲ್ಲೆ | 50 (ಐವತ್ತು) |

**ಷರತ್ತುಗಳು:-**

(1) ಕಾಲೇಜುಗಳು ಕೆ.ಎಸ್.ಯು ಅಧಿನಿಯಮ 2000ದ 59(18)ನೇ ಪ್ರಕರಣದಡಿ ಸಂಬಂಧಪಟ್ಟ ವಿಶ್ವವಿದ್ಯಾಲಯಗಳು ಮಂಜೂರು ಮಾಡಿರುವ ಮುಂದುವರಿಕೆ ಸಂಯೋಜನೆಯನ್ನು ಹೊಂದಿರತಕ್ಕದ್ದು.

(2) ವಿದ್ಯಾರ್ಥಿಗಳ ಪ್ರವೇಶವನ್ನು ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳನ್ವಯ ಕಟ್ಟು-ನಿಟ್ಟಾಗಿ ಪಡೆಯತಕ್ಕದ್ದು.

(3) ಸದರಿ 1999ರ ನಿಯಮಗಳ ನಿಯಮ 2(1)ರ ಅಡಿಯಲ್ಲಿ ನಿರ್ಧರಿಸಲಾಗಿರುವ ವಿದ್ಯಾರ್ಥಿ ಪ್ರಮಾಣಕ್ಕೆ ಅನುಗುಣವಾಗಿ ಮತ್ತು ಪೂರಕವಾಗಿ ವಿಧಿಸಲಾಗುವ ಷರತ್ತುಗಳಿಗೊಳಪಟ್ಟು ವಿದ್ಯಾರ್ಥಿಗಳ ಪ್ರವೇಶ ಪಡೆಯತಕ್ಕದ್ದು.

(4) ಕಾಲೇಜುಗಳು ಎನ್‌ಸಿಟಿಇ ಅಧಿನಿಯಮ 1993ರ 14ನೇ ಪ್ರಕರಣದಡಿ ಮಾನ್ಯತೆಯನ್ನು ಹೊಂದಿರತಕ್ಕದ್ದು.

(5) ಕಾಲೇಜುಗಳು ಎನ್‌ಸಿಟಿಇ ಜಾರಿಗೊಳಿಸಿರುವ ನೋಟೀಸ್‌ನಲ್ಲಿ ನಿರ್ದಿಷ್ಟಪಡಿಸಲಾಗಿರುವ ಷರತ್ತುಗಳನ್ನು ಕಟ್ಟು-ನಿಟ್ಟಾಗಿ ಪೂರೈಸತಕ್ಕದ್ದು. ಎನ್‌ಸಿಟಿಇ ಮಾನ್ಯತೆ ಹೊಂದಿದ ಹೊರತು ಕಾಲೇಜು ವಿದ್ಯಾರ್ಥಿಗಳ ಪ್ರವೇಶ ಪಡೆಯತಕ್ಕದ್ದಲ್ಲ.

(6) ನಿರ್ದಿಷ್ಟ ವಿನಾಯಿತಿ ನೀಡದ ಹೊರತು ಸಂಬಂಧಪಟ್ಟ ವಿಶ್ವವಿದ್ಯಾಲಯ ಮಂಜೂರು ಮಾಡಿರುವ ಮುಂದುವರಿಕೆ ಸಂಯೋಜನೆ ಮತ್ತು ಎನ್‌ಸಿಟಿಇ ಮಂಜೂರು ಮಾಡಿರುವ ಮಾನ್ಯತೆ ರಹಿತವಾಗಿ ವಿದ್ಯಾರ್ಥಿಗಳ ಪ್ರವೇಶ ಪಡೆಯುವುದು ಕರ್ನಾಟಕ ಮಾನ್ಯತೆರಹಿತ ಮತ್ತು ಅಸಂಯೋಜಿತ ಶಿಕ್ಷಣ ಸಂಸ್ಥೆಗಳಿಗೆ ವಿದ್ಯಾರ್ಥಿಗಳ ಪ್ರವೇಶ ನಿಷೇಧ ಅಧಿನಿಯಮ 1992ರ 3ನೇ ಪ್ರಕರಣದ ಉಲ್ಲಂಘನೆಯಾಗಿದ್ದು ಮೊಕದ್ದಮೆ ಹೂಡಲು ಆಕರ್ಷಿತವಾಗಿರುತ್ತದೆ.

(7) ನಿಗದಿತ ವಿದ್ಯಾರ್ಥಿ ಪ್ರಮಾಣಕ್ಕಿಂತ ಹೆಚ್ಚುವರಿಯಾಗಿ ವಿದ್ಯಾರ್ಥಿಗಳ ಪ್ರವೇಶ ಪಡೆಯುವುದು ಕೆ.ಎಸ್.ಯು ಅಧಿನಿಯಮ 2000 ದ 60ನೇ ಪ್ರಕರಣದ ಉಲ್ಲಂಘನೆಯಲ್ಲದೆ ಮೇಲ್ಕಂಡ 1992ರ ಅಧಿನಿಯಮ 4ನೇ ಪ್ರಕರಣದ ಉಲ್ಲಂಘನೆ ಸಹ ಆಗಿದ್ದು, ಮೊಕದ್ದಮೆ ಹೂಡಲು ಆಕರ್ಷಿತವಾಗುವುದಲ್ಲದೆ ಸಂಯೋಜನೆ ಹಿಂತೆಗೆದುಕೊಳ್ಳಲು ಸಕಾರಣವಾಗುತ್ತದೆ.

3) ಕೇಂದ್ರೀಕೃತ ಪ್ರವೇಶ ಘಟಕದ ವಿಶೇಷಾಧಿಕಾರಿಯವರು ಈ ಆದೇಶದಲ್ಲಿ ನಿರ್ದಿಷ್ಟಪಡಿಸಲಾಗಿರುವ ಎನ್‌ಸಿಟಿಇ ಮಾನ್ಯತೆ ಹೊಂದಿದ ದೈಹಿಕ ಶಿಕ್ಷಣ ಕಾಲೇಜುಗಳಿಗೆ ಮಾತ್ರ ಎನ್‌ಸಿಟಿಇ ಅನುಮೋದಿಸಿರುವ ವಿದ್ಯಾರ್ಥಿ ಪ್ರಮಾಣದ ಮಿತಿಯಲ್ಲಿ 1999ರ ನಿಯಮಗಳ ನಿಯಮ 2 (ಜೆ) ಯಲ್ಲಿ ನಿಗದಿಪಡಿಸಿರುವ ಪ್ರಮಾಣದಲ್ಲಿ ಅಭ್ಯರ್ಥಿಗಳನ್ನು ವಿತರಣೆ ಮಾಡತಕ್ಕದ್ದು. ಆದರೆ ಸಿಎಸಿಯ ಪ್ರವೇಶ ಪ್ರಕ್ರಿಯೆ ಮುಕ್ತಾಯಗೊಳ್ಳುವ ಮುನ್ನ ಎನ್‌ಸಿಟಿಇ ವಿದ್ಯಾರ್ಥಿ ಪ್ರಮಾಣವನ್ನು ನಿರ್ದಿಷ್ಟಪಡಿಸಿ ಮಾನ್ಯತೆಯನ್ನು ನೀಡಿದಲ್ಲಿ ಕೇಂದ್ರೀಕೃತ ಪ್ರವೇಶ ಘಟಕವು ಅಂತಹ ಕಾಲೇಜುಗಳಿಗೆ ಮಂಜೂರಾದ ವಿದ್ಯಾರ್ಥಿ ಪ್ರಮಾಣದ ಮಿತಿಯಲ್ಲಿ ನಿರ್ದಿಷ್ಟಪಡಿಸಿರುವ ಕೋಟಾ ನಿಯಮವನ್ನು ಅನುಸರಿಸಿ ವಿದ್ಯಾರ್ಥಿಗಳನ್ನು ವಿತರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 469

**ಸುಂದರ ರಾಜ ಗುಪ್ತ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಬಿಜಾಪುರ ಜಿಲ್ಲೆ ಕನ್ನಡ ಗ್ಯಾಸೆಟಿಯರ್ ಅನ್ನು ಆಂಗ್ಲ ಭಾಷೆಗೆ ಭಾಷಾಂತರಿಸುವ ಬಗ್ಗೆ ನೀಡುವ ಸಂಭಾವನೆಗೆ ಮಂಜೂರಾತಿ ಕೋರಿ.

**ಓದಲಾಗಿದೆ:** ಮುಖ್ಯ ಸಂಪಾದಕರು, ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಕಗ್ಯಾಎ/ಸಿ(2)ಬಿಜಾಪುರ/ಭಾಷಾಂತರ/2004-05 ದಿನಾಂಕ: 28.1.2005.

**ಪ್ರಸ್ತಾವನೆ:**

ಮೇಲೆ ಉಲ್ಲೇಖಿತ ಪತ್ರದಲ್ಲಿ ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಇವರು ಕರ್ನಾಟಕ ಗ್ಯಾಸೆಟಿಯರ್ ಇಲಾಖೆಯಲ್ಲಿ ಈಗಾಗಲೇ ಪ್ರಕಟಿಸಲಾದ ಬಿಜಾಪುರ ಜಿಲ್ಲಾ ಕನ್ನಡ ಗ್ಯಾಸೆಟಿಯರ್‌ನ ಆವೃತ್ತಿಯನ್ನು ಆಂಗ್ಲ ಭಾಷೆಯಲ್ಲಿ ಪ್ರಕಟಿಸುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲು ಯೋಜಿಸಿದ್ದು. 500 ಪ್ರತಿಗಳನ್ನು ಪ್ರಕಟಿಸುವ ಕೆಲಸವನ್ನು ಪ್ರಸಕ್ತ ಸಾಲಿನಲ್ಲಿ ಮಾಡಬೇಕಾಗಿರುತ್ತದೆ. ಭಾಷಾಂತರಿಸುವ ಕೆಲಸಕ್ಕೆ ಸರಾಸರಿ 400 ಪದಗಳುಳ್ಳ ಪ್ರತಿ ಮುದ್ರಿತ ಪುಟಕ್ಕೆ ಸರ್ಕಾರದ ಆದೇಶ ಸಂಖ್ಯೆ: ಸಂಕಇ 41 ಕಪ್ರದ 96 ದಿನಾಂಕ: 6.3.87ರ ಅನ್ವಯ ರೂ.55.00 ಸಂಭಾವನೆ ನಿಗದಿಪಡಿಸಿದೆ. ಸದರಿ ಕೆಲಸವು ಕ್ಲಿಷ್ಟಕರವಾಗಿದ್ದು ವಿದ್ವಾಂಸರು ಪರಿಶ್ರಮಪಡಬೇಕಾಗಿರುವುದರಿಂದ ಹಾಗೂ ಭಾಷಾಂತರ ಮಾಡಿದ ಹಸ್ತಪ್ರತಿಯನ್ನು ಬೆರಳಚ್ಚಿಸಿ ನೀಡಬೇಕಾಗಿರುವುದರಿಂದ ಸದರಿ ಸಂಭಾವನೆಯು ಸೂಕ್ತವಾಗಿರುತ್ತದೆ. ಬಿಜಾಪುರ ಜಿಲ್ಲಾ ಕನ್ನಡ ಜಿಲ್ಲಾ ಗ್ಯಾಸೆಟಿಯರ್ ಸುಮಾರು 1250 ಪುಟಗಳಿದ್ದು ಒಟ್ಟು ಅಂದಾಜು ವೆಚ್ಚ ರೂ.70,000-00 ಖರ್ಚಾಗುವ ಸಂಭವವಿರುತ್ತದೆ. ಸದರಿ ವೆಚ್ಚವನ್ನು 2004-05ನೇ ಸಾಲಿನಲ್ಲಿ ಯೋಜನೇತರ ಲೆಕ್ಕಶೀರ್ಷಿಕೆ 3454-02-110-0-02 ಸಾಮಗ್ರಿ ಸರಬರಾಜು ಅಡಿಯಲ್ಲಿ ಲಭ್ಯವಿರುವ ರೂ.5.00 ಲಕ್ಷಗಳ ಅನುದಾನದಲ್ಲಿ ಭರಿಸಲು ಅವಕಾಶವಿರುತ್ತದೆ ಎಂದು ಕೋರಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ತಡೆಪಟ್ಟಿಯೊಂದಿಗೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 3 ಕರಾಗ 2005 ಬೆಂಗಳೂರು, ದಿನಾಂಕ: 10ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ, ಬಿಜಾಪುರ ಜಿಲ್ಲಾ ಕನ್ನಡ ಗ್ಯಾಸೆಟಿಯರ್‌ನ್ನು ಆಂಗ್ಲ ಭಾಷೆಗೆ ಭಾಷಾಂತರಿಸುವ ಬಗ್ಗೆ ಹಾಗೂ ಭಾಷಾಂತರ ಮಾಡಿದ ಹಸ್ತಪ್ರತಿಯನ್ನು ಬೆರಳಚ್ಚಿಸಿ ನೀಡಲು ಪ್ರತಿ ಮುದ್ರಿತ ಪುಟಕ್ಕೆ ರೂ.55.00 ರಂತೆ ಒಟ್ಟು ರೂ.70.000-00 (ರೂಪಾಯಿ ಎಪ್ಪತ್ತು ಸಾವಿರಗಳು ಮಾತ್ರ) ಗಳ ಸಂಭಾವನೆ ಹಣ ಪಾವತಿ ಮಾಡಲು ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಇವರಿಗೆ ಮಂಜೂರು ಮಾಡಲಾಗಿದೆ.

ಈ ವೆಚ್ಚವನ್ನು ಪ್ರಸ್ತುತ ಆರ್ಥಿಕ ಸಾಲಿನಲ್ಲಿ ಲೆಕ್ಕಶೀರ್ಷಿಕೆ 3454-02-110-0-02 (ಯೋಜನೇತರ) ಉಪಶೀರ್ಷಿಕೆ 221 ಸಾಮಗ್ರಿ ಮತ್ತು ಸರಬರಾಜು ಅಡಿಯಲ್ಲಿ ಲಭ್ಯವಿರುವ ರೂ.5.00 ಲಕ್ಷಗಳ ಅನುದಾನದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಶಿಕ್ಷಣ ಇಲಾಖೆ, ಇವರ ಟಿಪ್ಪಣಿ ಸಂಖ್ಯೆ: ಶಿಇ 180 ಐಎಫ್ (ಬಿಎ) 2005 ದಿನಾಂಕ: 28.2.2005ರಲ್ಲಿ ನೀಡಿರುವ ಸಹಮತಿ ಮೇರೆಗೆ ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.96ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 470

**ಎಸ್. ವಿಶಾಲಾಕ್ಷಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ವಿಷಯ:** 2004-05ನೇ ಆರ್ಥಿಕ ಸಾಲಿನಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ಇವರ ಸಹಭಾಗಿತ್ವದಲ್ಲಿ ಕುಡಚಿ ಉತ್ಖನನವನ್ನು ಕೈಗೊಳ್ಳಲು ಸರ್ಕಾರದ ಅನುಮತಿ ಹಾಗೂ ಅನುದಾನ ಬಿಡುಗಡೆ ಕೋರಿ.

**ಓದಲಾಗಿದೆ:**

1. ಸರ್ಕಾರದ ಪತ್ರ ಸಂಖ್ಯೆ: ಸಂಕಇ 103 ಸ್ವೀಮರ 2004 ದಿನಾಂಕ: 6.12.2004.
2. ಕುಲಸಚಿವರು, ಕರ್ನಾಟಕ ವಿಶ್ವವಿದ್ಯಾಲಯ ಇವರ ಪತ್ರದ ಸಂಖ್ಯೆ: ಕೆಯು/ಪಿಎಇಲ್‌ಜಿ/ಎಸ್.ಎಂ.ಡಿ/ 2004-05/ 610/4332, ದಿನಾಂಕ: 2.2.2005.
3. ನಿರ್ದೇಶಕರು, ಪ್ರಾಚ್ಯವಸ್ತು ಸಂಗ್ರಹಾಲಯ ಇವರ ಪತ್ರ ಸಂಖ್ಯೆ: ಡಿಎಎಂ:ಎಸಿಟಿ:1:38/2004-05 ದಿನಾಂಕ: 07.02.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಉತ್ಖನನವನ್ನು ವಿಶ್ವವಿದ್ಯಾಲಯಗಳ ಮೂಲಕ ಜಂಟಿಯಾಗಿ ಮಾಡುವ ಬಗ್ಗೆ ಪರಿಶೀಲಿಸಲು ಸೂಚಿಸಲಾಗಿದೆ.

(2)ರಲ್ಲಿ ಓದಲಾದ ಕುಲಸಚಿವರು ಕರ್ನಾಟಕ ವಿಶ್ವವಿದ್ಯಾಲಯ ಇವರ ಪತ್ರದಲ್ಲಿ ಕುಡಚಿ ಉತ್ಖನನಕ್ಕೆ ಸಂಬಂಧಿಸಿದಂತೆ ಪ್ರಸ್ತಾಪಿಸಲಾಗಿದೆ. ಕುಡಚಿ ಬೂದಿ ದಿಬ್ಬ ಉತ್ಖನನಕ್ಕೆ ಪ್ರಸಕ್ತ ವರ್ಷದಲ್ಲಿ ಆಗಬಹುದಾದ ಖರ್ಚಿನ ಅಂದಾಜು ಮತ್ತು ವಿವರಗಳನ್ನು ನೀಡಿದ್ದು, ಆ ಪ್ರಕಾರ ಸುಮಾರು 55.000-00 ರೂಪಾಯಿಗಳು ಖರ್ಚು ತಗುಲಬಹುದೆಂದು ಈ ಮೊಬಲಗಿನಲ್ಲಿ 20,000/- ರೂಪಾಯಿಗಳನ್ನು ಪ್ರಾಚೀನ ಭಾರತೀಯ ಇತಿಹಾಸ ಮತ್ತು ಶಾಸನ ವಿಜ್ಞಾನ ವಿಭಾಗ ಕರ್ನಾಟಕ ವಿಶ್ವವಿದ್ಯಾಲಯದಿಂದ ಭರಿಸಲಾಗುವುದೆಂದು ತಿಳಿಸಿರುತ್ತಾರೆ.

(3) ರಲ್ಲಿ ಓದಲಾದ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದವರ ಪತ್ರದಲ್ಲಿ ಬೆಳಗಾಂ ಜಿಲ್ಲೆಯ ರಾಯಭಾಗ್ ತಾಲ್ಲೂಕಿನ ಕುಡಚಿ ಬೂದಿದಿಬ್ಬದ ಉತ್ಖನನವನ್ನು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಯ ಸಹಭಾಗಿತ್ವದೊಂದಿಗೆ ಕೈಗೊಳ್ಳಲು ಕರ್ನಾಟಕ ವಿಶ್ವವಿದ್ಯಾಲಯವು ಉದ್ದೇಶಿಸಿದೆಯೆಂದು ಈ ಉದ್ದೇಶಕ್ಕಾಗಿ ತಗಲುವ ವೆಚ್ಚ 55.000/- ರೂಪಾಯಿಗಳಾಗಿದ್ದು ಇದರಲ್ಲಿ ವಿಶ್ವವಿದ್ಯಾಲಯದ 20.000/- ರೂಪಾಯಿಗಳನ್ನು ಭರಿಸುವುದೆಂದು ಉಳಿದ 35,000/- ರೂಪಾಯಿಗಳನ್ನು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಯಿಂದ ಭರಿಸಬೇಕಾಗುವುದೆಂದು ತಿಳಿಸಿದ್ದಾರೆ. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2205-00-103-0-01 (ಯೋಜನೇತರ) 059 ಇತರ ಖರ್ಚು ಅಡಿಯಲ್ಲಿ ಈ ಬಾಬ್ತಿಗೆ ಕ್ರಿಯಾ ಯೋಜನೆಯಲ್ಲಿ ನಿಗದಿಪಡಿಸಿಕೊಂಡ ಅನುದಾನ ರೂ.2.50 ಲಕ್ಷದಲ್ಲಿ ಭರಿಸಬಹುದಾಗಿದೆ ಎಂದು ತಿಳಿಸಿರುತ್ತಾರೆ.

ಈ ಹಿನ್ನಲೆಯಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 41 ಕೆಎಂಯು 2005, ಬೆಂಗಳೂರು, ದಿನಾಂಕ: 10ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ 2004-05ನೇ ಸಾಲಿನಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಯು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಇವರ ಸಹಯೋಗದೊಂದಿಗೆ ಕುಡಚಿ ಉತ್ಖನನವನ್ನು ಕೈಗೊಳ್ಳಲು ಅನುಮತಿಯನ್ನು ಹಾಗೂ ಉತ್ಖನನಕ್ಕೆ ತಗಲುವ ಒಟ್ಟು ವೆಚ್ಚ ರೂ.55.000 (ಐವತ್ತೈದು ಸಾವಿರ ರೂಪಾಯಿಗಳು ಮಾತ್ರ) ದಲ್ಲಿ ರೂ.20.000 (ಇಪ್ಪತ್ತು ಸಾವಿರ ರೂಪಾಯಿಗಳು ಮಾತ್ರ) ವನ್ನು ಕರ್ನಾಟಕ

ವಿಶ್ವವಿದ್ಯಾಲಯವು ಭರಿಸಬೇಕೆಂಬ ಷರತ್ತಿಗೊಳಪಟ್ಟು ರೂ.35.000 (ಮೂವತ್ತೈದು ಸಾವಿರ ರೂಪಾಯಿಗಳು ಮಾತ್ರ) ವನ್ನು ಅಧ್ಯಕ್ಷರು ಮತ್ತು ಉತ್ಖನನದ ನಿರ್ದೇಶಕರು, ಪ್ರಾಚೀನ ಭಾರತ ಇತಿಹಾಸ ಮತ್ತು ಶಾಸನ ಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಇವರಿಗೆ ಬಿಡುಗಡೆ ಮಾಡಲು ನಿರ್ದೇಶಕರು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ ಹೊಸಪೇಟೆ ಇವರಿಗೆ ಮಂಜೂರಾತಿ ನೀಡಿ ಆದೇಶಿಸಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2205-00-103-0-01 (ಯೋಜನೇತರ)059 ಇತರ ಖರ್ಚು ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ-1 ಟಿಎಫ್‌ಪಿ 96 ದಿನಾಂಕ: 10.7.1996ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 471

**ಎಸ್. ವಿಶಾಲಾಕ್ಷಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

**ವಿಷಯ:** ಮೈಸೂರಿನಲ್ಲಿರುವ ಚಾಮರಾಜೇಂದ್ರ ದೃಶ್ಯಕಲಾ ಅಕಾಡೆಮಿ ಕಟ್ಟಡದ ಪುನರುಜ್ಜೀವನ ಮತ್ತು ಅಭಿವೃದ್ಧಿ ಕಾಮಗಾರಿ ಕೈಗೊಳ್ಳುವ ಬಗ್ಗೆ ಆಯುಕ್ತರ ಕಛೇರಿಗೆ 2004-05ನೇ ಸಾಲಿನಲ್ಲಿ ಬಿಡುಗಡೆ ಮಾಡಿರುವ ಅನುದಾನವನ್ನು ಲೋಕೋಪಯೋಗಿ ಇಲಾಖೆಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಸಂಕಇ 103 ಸ್ಕೀಮರ 2004 ದಿನಾಂಕ: 24.9.2004.

2. ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಇವರ ಪತ್ರ ಕ್ರಮಾಂಕ: ಆಪ್ರಾಸಂಪ/ ಕಾವಾ/ 2004-05 ದಿನಾಂಕ: 19.1.2005.

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ (1)ರ ಸರ್ಕಾರದ ಆದೇಶದಲ್ಲಿ ಪಾರಂಪರಿಕ ವಿಷಯಗಳಿಗೆ ಸಂಬಂಧಿಸಿದಂತೆ ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಇವರು 2004-05ನೇ ಸಾಲಿನಲ್ಲಿ ಆಯವ್ಯಯದಲ್ಲಿ ಹೊಸದಾಗಿ ಒದಗಿಸಿರುವ ರೂ.135 ಲಕ್ಷಗಳಿಗೆ ತಯಾರಿಸಲಾದ ಕ್ರಿಯಾ ಯೋಜನೆಯನ್ನು ಪ್ರಸಕ್ತ ಸಾಲಿನಲ್ಲಿ ಅನುಷ್ಠಾನಗೊಳಿಸಲು ಅನುಮೋದನೆಯನ್ನು ನೀಡಲಾಗಿದೆ.

ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯು, ಮೈಸೂರು, ಶ್ರೀರಂಗಪಟ್ಟಣ, ಬಿಜಾಪುರ, ಗುಲ್ಬರ್ಗಾ, ಬೀದರ್ ಹಾಗೂ ಕಿತ್ತೂರು ಈ ಪ್ರದೇಶಗಳಲ್ಲಿರುವ ಪಾರಂಪರಿಕ ಕಟ್ಟಡಗಳು ಹಾಗೂ ನಿವೇಶನಗಳ ಸಂರಕ್ಷಣೆ ಮತ್ತು ಅಭಿವೃದ್ಧಿ ಕೈಗೊಳ್ಳುವ ಉದ್ದೇಶ ಹೊಂದಿರುತ್ತದೆ.

ಮೇಲೆ ಓದಲಾದ ಉಲ್ಲೇಖ (2)ರ ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ರವರ ಪತ್ರದಲ್ಲಿ ಮೈಸೂರಿನಲ್ಲಿರುವ ಚಾಮರಾಜೇಂದ್ರ ದೃಶ್ಯಕಲಾ ಅಕಾಡೆಮಿ ಕಟ್ಟಡದ ಪುನರುಜ್ಜೀವನ ಹಾಗೂ ಅಭಿವೃದ್ಧಿ ಕಾಮಗಾರಿಗಳಿಗಾಗಿ ವಿನಿಯೋಗಿಸಲು ರೂ.2.00 ಲಕ್ಷ ಅನುದಾನವನ್ನು ನಿಗದಿಪಡಿಸಲಾಗಿದ್ದು ಇದಕ್ಕೆ ಸರ್ಕಾರದ ಅನುಮೋದನೆ ದೊರೆತಿರುತ್ತದೆ. ಸದರಿ ಕಾಮಗಾರಿಯ ಕೆಲಸವನ್ನು 2004-05ರ ಸಾಲಿನಲ್ಲಿ ಕೈಗೆತ್ತಿಕೊಂಡು ಪಾರದರ್ಶಕ ನಿಯಮಾನುಸಾರ ಪೂರ್ಣಗೊಳಿಸುವ ನಿಟ್ಟಿನಲ್ಲಿ ಕಾರ್ಯಪಾಲಕ ಇಂಜಿನಿಯರ್ ಲೋಕೋಪಯೋಗಿ ಇಲಾಖೆ, ಕಟ್ಟಡಗಳ ವಿಭಾಗ, ಮೈಸೂರು ಇವರಿಗೆ ರೂ.2.00 ಲಕ್ಷ ಹಣವನ್ನು ಯೋಜನೆ ಲೆಕ್ಕಶೀರ್ಷಿಕೆ 2205-00-103-0-21-059 ಇತರೆ ಖರ್ಚು ಅಡಿಯಲ್ಲಿ ಬಿಡುಗಡೆ ಆದೇಶ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 31 ಕೆಎಂಯು 2005 ಬೆಂಗಳೂರು ದಿನಾಂಕ: 10ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2004-05ನೇ ಆರ್ಥಿಕ ಸಾಲಿನಲ್ಲಿ ಪಾರಂಪರಿಕ ಕಟ್ಟಡವಾಗಿ ಮೈಸೂರಿನ ಚಾಮರಾಜೇಂದ್ರ ದೃಶ್ಯಕಲಾ ಅಕಾಡೆಮಿ ಕಟ್ಟಡದ ಪುನರುಜ್ಜೀವನ ಹಾಗೂ ಅಭಿವೃದ್ಧಿ ಕಾಮಗಾರಿಗಳಿಗಾಗಿ, ಪಾರದರ್ಶಕ ನಿಯಮವನ್ನು ಪಾಲಿಸಬೇಕೆಂಬ ಷರತ್ತಿನೊಂದಿಗೆ ರೂ.2.00 ಲಕ್ಷವನ್ನು (ರೂಪಾಯಿ ಎರಡು ಲಕ್ಷ ಮಾತ್ರ) ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ ಕಟ್ಟಡಗಳ ವಿಭಾಗ, ಮೈಸೂರು ಇವರಿಗೆ ಬಿಡುಗಡೆ ಮಾಡಲು ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು ಇವರಿಗೆ ಮಂಜೂರಾತಿ ನೀಡಿ ಆದೇಶಿಸಿದೆ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2205-00-103-0-21-059 (ಯೋಜನೆ) ಇತರೆ ಖರ್ಚು ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಅಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಶೀಇ 165 ಐಎಫ್(ಬಿಎ) 2005 ದಿನಾಂಕ: 23.2.2005ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 472

**ಎಸ್. ವಿಶಾಲಾಕ್ಷಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಕರ್ನಾಟಕ ಸಮುದಾಯ ಆಧಾರಿತ ಕೆರೆ ನಿರ್ವಹಣೆ ಯೋಜನೆಗೆ 2004-05ನೇ ಸಾಲಿಗೆ ಮೂರನೆಯ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ: ಸನೀಇ 01 ಜಸಂಯೋ 2002 ದಿನಾಂಕ: 15.07.2004.

2. ಸರ್ಕಾರದ ಆದೇಶ ಸಂ: ಸನೀಇ 01 ಜಸಂಯೋ 2002 ದಿನಾಂಕ: 12.01.2005.

3. ಕಾರ್ಯನಿರ್ವಾಹಕ ನಿರ್ದೇಶಕರು, ಜಲಸಂವರ್ಧನೆ ಯೋಜನಾ ಸಂಘ, ಬೆಂಗಳೂರು ಇವರ ದಿನಾಂಕ: 24.02.05ರ ಪತ್ರ ಸಂ:ಜಸಂಯೋ/ಬೆಂಗ/ಲೆಕ್ಕ-68/2004-05.

**ಪ್ರಸ್ತಾವನೆ:**

ಜಲಸಂವರ್ಧನೆ ಯೋಜನೆಯನ್ನು ಕಾರ್ಯಗತಗೊಳಿಸುತ್ತಿರುವ ಕರ್ನಾಟಕ ಸಮುದಾಯ ಆಧಾರಿತ ಕೆರೆ ನಿರ್ವಹಣೆ ಯೋಜನೆಯ ಕಾರ್ಯಕ್ರಮಗಳಿಗೆ 2004-05ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702-00-101-2-80-139 (ಯೋಜನೆ) ಅಡಿ ರೂ.9652.53 ಲಕ್ಷಗಳ ಅನುದಾನ ಒದಗಿಸಲಾಗಿದೆ. ಈ ಅನುದಾನದಲ್ಲಿ ಅರ್ಧವಾರ್ಷಿಕ ವೆಚ್ಚಕ್ಕಾಗಿ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರೂ.2800.00 ಲಕ್ಷಗಳನ್ನು ಹಾಗೂ ದ್ವಿತೀಯ ಅರ್ಧವಾರ್ಷಿಕ ಕಾರ್ಯಕ್ರಮಗಳಿಗಾಗಿ ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರೂ.3000.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. ಕಾರ್ಯನಿರ್ವಾಹಕ ನಿರ್ದೇಶಕರು, ಜಲಸಂವರ್ಧನೆ ಯೋಜನಾ ಸಂಘರವರು 2004-05ನೇ ಸಾಲಿನಲ್ಲಿ 678 ಕೆರೆಗಳನ್ನು ಪುನಶ್ಚೇತನಗೊಳಿಸುವ ಕಾರ್ಯಕ್ರಮವನ್ನು ಕೈಗೆತ್ತಿಕೊಂಡಿದ್ದು, ಈ ಪೈಕಿ 102 ಕೆರೆಗಳ ಕಾಮಗಾರಿಗಳು ಮುಕ್ತಾಯಮಟ್ಟಕ್ಕೆ ತಲುಪಿದ್ದು ಸದರಿ ಕೆರೆಗಳನ್ನು ಸಮುದಾಯಕ್ಕೆ ಹಸ್ತಾಂತರಿಸಬೇಕಾಗಿದೆ. ಉಳಿದ 576 ಕೆರೆಗಳ ಕಾಮಗಾರಿಗಳು ಪ್ರಗತಿಯ ವಿವಿಧ ಹಂತದಲ್ಲಿರುತ್ತವೆ. ಸರ್ಕಾರದಿಂದ ಬಿಡುಗಡೆಯಾಗಿರುವ ಮೊತ್ತದಲ್ಲಿ ವಿವಿಧ ಹಂತದಲ್ಲಿರುವ ಕಾಮಗಾರಿ, ತರಬೇತಿ, ಸರ್ಕಾರೇತರ ಸಂಸ್ಥೆಗಳು ಹಾಗೂ ಕೃಷಿ ವಿಶ್ವವಿದ್ಯಾಲಯದ ಕಾರ್ಯಚಟುವಟಿಕೆಗಳು, ಯೋಜನೆಯ ಸಲಹೆಗಾರರಿಗೆ ಸಂಭಾವನೆ ಹಾಗೂ ಯೋಜನಾ ಸಿಬ್ಬಂದಿ ವೆಚ್ಚಗಳಿಗೆ ಏಪ್ರಿಲ್ 2004 ರಿಂದ ಫೆಬ್ರವರಿ ಅಂತ್ಯದೊಳಗೆ ವೆಚ್ಚವಾಗುವುದಾಗಿ ತಿಳಿಸಿ ಉಳಿದಂತೆ ಮಾರ್ಚ್ 2005ರ ಅಂತ್ಯದೊಳಗೆ ರೂ.20.00 ಕೋಟಿಗಳ ಅನುದಾನವನ್ನು ವೆಚ್ಚ ಮಾಡುವುದಾಗಿ ತಿಳಿಸಿದ್ದಾರೆ. ಈ ಅಂಶಗಳ ಹಿನ್ನೆಲೆಯಲ್ಲಿ ಪ್ರಸ್ತುತ 2004-05ನೇ ಸಾಲಿನ ಆಯವ್ಯಯದಲ್ಲಿ ನಿಗದಿಪಡಿಸಿರುವ ಮೊತ್ತದಲ್ಲಿ ಲೆಕ್ಕಶೀರ್ಷಿಕೆ 4702-00-101-2-80-139 ಕರ್ನಾಟಕ ಸಮುದಾಯ ಆಧಾರಿತ ಕೆರೆ ನಿರ್ವಹಣೆ ಯೋಜನೆ-ಪ್ರಧಾನ ಕಾಮಗಾರಿಗಳು ಯೋಜನೆಯಡಿಯಲ್ಲಿ ರೂ.20.00 ಕೋಟಿಗಳನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂ:ಸನೀಇ 01 ಜಸಂಯೋ 2002 ಬೆಂಗಳೂರು, ದಿನಾಂಕ: 23ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಮುದಾಯ ಆಧಾರಿತ ಕೆರೆ ನಿರ್ವಹಣಾ ಯೋಜನೆಗಾಗಿ 2004-05ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702-00-101-2-80-139 (ಯೋಜನೆ) ಅಡಿ ಒದಗಿಸಿರುವ ಅನುದಾನದಲ್ಲಿ ಮೂರನೆಯ ಕಂತಿನ ಮೊತ್ತವಾಗಿ ರೂ.20.00 ಕೋಟಿಗಳನ್ನು (ಇಪ್ಪತ್ತು ಕೋಟಿ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಿದೆ.

ಕಾರ್ಯನಿರ್ವಾಹಕ ನಿರ್ದೇಶಕರು, ಜಲಸಂವರ್ಧನೆ ಯೋಜನಾ ಸಂಘ ಬೆಂಗಳೂರು ರವರು ಹಣ ಸಂದಾಯ ಸ್ವೀಕೃತಿಯ ಮೇಲೆ ವಿಶೇಷ ಕರ್ತವ್ಯಾಧಿಕಾರಿಗಳು, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) ರವರಿಂದ ಮೇಲುರುಜು ಮಾಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ: 21.03.2005ರ ಟಿಪ್ಪಣಿ ಸಂ:ಲೋಇ 240 ಅಕೋ-1/2005ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 474

**ಎಂ. ಎನ್. ಮಂಜುನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## FINANCE SECRETARIAT

**Subject :** Third Party Inspection of Works, Goods and Equipment.

**Preamble:**

1. There are no specific provisions regarding Inspection of Works in the Karnataka Public Works Department Manual. Clauses 12 (b) and (c) of the PWG 65, the approved tender document for works, lay down the Guidelines for Inspection of Works. The Contractor is primarily responsible to ensure that the works are executed as per Specifications and deliver the Works in sound condition. The Departmental Officers have to make periodical checks to ensure the quality of works. The Government is concerned over the deterioration in the quality of the works executed. To assist the Departmental Officers to ensure quality work, in some major projects separate in-house quality control organizations have been set up and in some other projects funded by International Donor Agencies, Supervision Consultants have been employed. However for most of the works under execution the Departmental Officers (here-in-after called Employer) are responsible for ensuring the quality of the works.

2. Similar is the position in respect of procurement of goods and equipment. The inspection is mostly in-house. In some PSUs third party inspections are adopted on a case-by-case basis and there is no consistency and uniformity of approach.

3. Complaints regarding acceptance of poor quality of works and procurement of goods and equipment not conforming to stipulated specifications continue to be reported.

4. The Sub-Committee under the Chairmanship of Secretary PWD, constituted by Government vide No. PWD 122 SO/FC 2003, Bangalore dated: 8.5.2003 to examine and make recommendations regarding various aspects of Procurement Reform in the State examined the measures to improve quality control of works, inspection of goods and equipment and has made recommendations for improvement of Quality Control. The Working Group constituted vide GO.No. PWD 1359 SO/FC 2001 dated: 14.8.2002 reviewed and endorsed the recommendations of Sub-Committee. The Standing Committee for

Procurement Reforms Action Plan based of CPAR, Karnataka constituted vide GO No. PWD 1359 SO/FC 2001 dated: 5.8.2002 examined the recommendations in detail.

5. Third Party Inspection of Works and Supplies would ensure adherence to quality standards, leading to value for money. This will also check corruptive practices and instill public confidence in the system.

**Government Order No. FD 55 Pro. Cell 2004, Bangalore dated: 17th February 2005**

1. Based on the recommendations of the Standing Committee the following orders are issued.

(a) The appointment of independent Third Party Inspectors designated as Quality Supervision Consultants would go a long way in assisting the Departmental Officers to ensure adherence to quality standards in construction works and procurement of goods and equipment.

(b) Third Party Inspection shall be mandatory in respect of all works contracts of estimated value more than Rs.2 crore and all goods and equipment contracts estimated to cost more than Rs.25 lakhs for an item of goods and equipment:

(c) Reputed Quality Supervision Consultants (either Individual or Firm) Known for integrity and professionalism should be appointed by following the procedures for procurement of Consultancy/services issued vide GO No. PWD 121 SO/FC 2003, Bangalore dated: 26.9.2003 with amendments issued from time to time thereof. The Terms of Reference should be well defined. Detailed Checklists, to be completed by the Quality Supervision Consultants, should be prepared (with the assistance of experts if need be) to ensure that the Consultants perform their obligations satisfactorily;

(d) The employment of the Quality Supervision Consultants could be either for one or more contracts for works or procurement of goods and equipment or for procurement made in a term or stipulated period for a Procurement Entity;

(e) Heads of the Department of the Government/Managing Directors of PSUs' Boards/ Societies/ Local Bodies shall employ the Quality Supervision Consultants and order payments to them on satisfactory performance. The expenditure on the employment of the Quality Supervision Consultants shall be charged to the cost of the works and goods and equipment under procurement;

(f) The Quality Supervision Consultant shall inspect the works periodically, submit reports along with the prescribed checklists duly completed to the Employer for taking action with a copy to the Secretary to the Government/ Managing Director of the Corporation/Board/ Society/ Local body, who will be responsible for review of the Action Taken Reports of the Employer;

(g) The Quality Supervision Consultant shall inspect the goods and equipment during manufacture/before dispatch/after receipt, assembly and commissioning as per the terms of the contract and submit reports along with Prescribed checklists duly completed to the Purchaser with a copy to the Secretary to the Government/Managing Director of the Corporation/Board Society/Local body who will be responsible for review of the Action Taken Reports of the Purchaser;

(h) The employment of the Quality Supervision Consultant and the inspections conducted by them shall not absolve the primary responsibility of the Employer to ensure completion of works of sound quality as per stipulated specifications and of Purchasers for Procurement of goods and equipment of good quality as per stipulations in the specifications. The Quality Supervision Consultants are there to assist the Employer/ Purchaser in discharging their primary responsibility.

(i) The Quality Supervision Consultants should not be employed in respect of works and goods and equipment contracts of projects, where a specialized in house Quality Control Organization exists is planned or a separate Supervision Consultant has been employed.

2. This order will apply prospectively and will not be applicable for contracts concluded in the past or for tenders already invited.

3. This order shall apply to all Procurement Entities as defined in Section 2 (d) of Chapter I of the KTPP Act, 1999.

4. This order shall be appropriately incorporated in the Special Conditions of Contract of the Tender documents.

5. The contents of this order shall be appropriately incorporated in the Karnataka Public Works Department and other Manuals.

By Order and in the Name of the Governor of Karnataka,

PR-479

**Sudhakar Rao**
Principal Secretary to the Government,
Finance Department.

## SOCIAL WELFARE SECRETARIAT

**Subject :** Extending of Government Guarantee in favour of National Minorities Development and Finance Corporation for the loan to be raised by Karnataka Minorities Development Corporation-reg.

**Read :**
1. Letter No. KMDC/BLOCK/GUARANTEE/2004-05/3705 dated:9.2.05 from the Managing Director, Karnataka Minorities Development Corporation, Bangalore.
2. Letter No. NMDFC/PROJ/KAR/1/2005/2590 dated: 1.3.05 from the National minorities Development & Finance Corporation, New Delhi.

**Preamble:**

The Karnataka Minorities Development Corporation is implementing various Schemes of the State Government. It also implements various schemes of National Minorities Development and Finance Corporation for the benefit of the Minorities in the State. Under the scheme of National Minorities Development and Finance Corporation, the National Corporation meats 85% of the loan portion and release the same through the Karnataka Minorities Development Corporation.

To extend loan facilities to Karnataka Minorities Development Corporation, the State Government has to extend Government Guarantee to the National Minorities Development and Finance Corporation. So far, the State Government has extended Government Guarantee to the extent of Rs. 2090.10 Lakhs. The Managing Director, Karnataka Minorities Development corporation has stated in his letter dated: 9.2.05 read above that the National Minorities Development and Finance Corporation has agreed to extend the loan facilities under Direct Loan Scheme.

The Managing Director, Karnataka Minorities Development Corporation has requested the Government to extend Guarantee to the tune of Rs. 30.00 Crores (Rupees Thirty Crores only) in favour of National Minorities Development and Finance Corporation to obtain loan facilities for implementation of the Direct Loan Scheme. Hence, the Orders.

**Government Order No. SWD 137 KMDC 2005 dated: 22nd March 2005**

After due examination of the proposal of the Managing Director, Karnataka Minorities Development Corporation, Government are pleased to extend Government Guarantee to the extent of Rs.5.00 Crores (Rupees Five Crores only) in favour of National Minorities Development and Finance Corporation, New Delhi so as to enable the Karnataka Minorities Development Corporation to secure loan for implementation of the Direct Loan Scheme subject to payment of 1% Guarantee commission required under Section-5 of the Karnataka Government Guarantee Limitation Act 1999.

This Order is issued with the concurrence of the Finance Department vide its U.O. Note No.FD 184 Exp-III 2005 dated: 21.3.2005.

By Order and in the Name of the Governor of Karnataka,

PR-480

**M. Pranadeva**
Under Secretary to the Government,
Social Welfare Department.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಹುದ್ದೆ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 18 ಸಸಿವಿ 97, ದಿನಾಂಕ: 20.6.1997.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 18 ಸಸಿವಿ 97, ದಿನಾಂಕ: 27.6.1997.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 28 ಸಸಿವಿ 98, ದಿನಾಂಕ: 3.7.1998.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 40 ಸಸಿವಿ 98, ದಿನಾಂಕ: 30.11.1998.
5. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 264 ಎಸ್‌ಎಎಸ್ 98, ದಿನಾಂಕ: 10.5.1999.
6. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 15 ಸಸಿವಿ 99, ದಿನಾಂಕ: 1.6.1999.
7. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 15 ಸಸಿವಿ 99, ದಿನಾಂಕ: 16.2.2000.
8. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 10 ಸಸಿವಿ 2001, ದಿನಾಂಕ: 22.3.2001.
9. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 21 ಸಸಿವಿ 2001, ದಿನಾಂಕ: 2.5.2001.
10. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 31 ಸಸಿವಿ 2002, ದಿನಾಂಕ: 23.5.2002.
11. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 23 ಸಸಿವಿ 2003, ದಿನಾಂಕ: 13.3.2003.
12. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 11 ಸಸಿವಿ 2004, ದಿನಾಂಕ: 28.2.2004.
13. ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 2604 ಪ್ರಕಾ (ಆಸು) 2005, ದಿನಾಂಕ: 7.3.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಲ್ಲಿ ದಿನಾಂಕ: 17.6.1997ರ ಅಪರಾಹ್ನದಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಕೆಳಕಂಡ ಸಿಬ್ಬಂದಿಗಳನ್ನು ಒಳಗೊಂಡಂತೆ ಸರ್ಕಾರದ ವಿಶೇಷ ಕಾರ್ಯದರ್ಶಿ (ಆಡಳಿತ ಸುಧಾರಣೆಗಳು, ತರಬೇತಿ ಮತ್ತು ವಿಶ್ರಾಂತಿ ವೇತನಗಳು) ಹುದ್ದೆಯನ್ನು ಸೃಜಿಸಲಾಗಿದೆ.

1. ಭಾಷಾಂತರಕಾರರು — 1 ಹುದ್ದೆ
2. ಶೀಘ್ರಲಿಪಿಗಾರರು — 2 ಹುದ್ದೆಗಳು
3. ಕಿರಿಯ ಸಹಾಯಕರು — 1 ಹುದ್ದೆ
4. ದಲಾಯತ್ — 2 ಹುದ್ದೆಗಳು

ಕ್ರಮ ಸಂಖ್ಯೆ (2) ರಲ್ಲಿ ಓದಲಾಗಿರುವ ಸೇರ್ಪಡೆಯಲ್ಲಿ ದಿನಾಂಕ: 20.6.1997ರ ಸರ್ಕಾರದ ಆದೇಶದಲ್ಲಿ ಸೃಜಿಸಿರುವ ವಿಶೇಷಾಧಿಕಾರಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಇವರ ಆಪ್ತ ಶಾಖೆಗೆ ಚಾಲಕ ಹುದ್ದೆಯೊಂದನ್ನು ಸೇರ್ಪಡೆ ಮಾಡಲಾಗಿದೆ.

ಕ್ರಮ ಸಂಖ್ಯೆ (3) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಮೇಲ್ಕಂಡ ಹುದ್ದೆಗಳನ್ನು ದಿನಾಂಕ: 17.6.1998 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

ಕ್ರಮ ಸಂಖ್ಯೆ (4)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ವಿಶೇಷ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ ಮತ್ತು ರಾಜಕೀಯ ವಿಶ್ರಾಂತಿ ವೇತನ) ಈ ಹುದ್ದೆಯನ್ನು ಸರ್ಕಾರದ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಹುದ್ದೆ ಎಂದು ಮರುಪದನಾಮೀಕರಿಸಲಾಗಿದೆ.

ಕ್ರಮ ಸಂಖ್ಯೆ (6) (7) (8) ರಲ್ಲಿ ಓದಲಾಗಿರುವ ಸರ್ಕಾರದ ಆದೇಶಗಳಲ್ಲಿ ಸದರಿ ಹುದ್ದೆಗಳನ್ನು ದಿನಾಂಕ: 31.3.2002 ರವರೆಗೆ ಮುಂದುವರೆಸಲಾಗಿದೆ.

ಕ್ರಮ ಸಂಖ್ಯೆ (9)ರ ಸರ್ಕಾರದ ಆದೇಶದಲ್ಲಿ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಹುದ್ದೆಯನ್ನು ದಿನಾಂಕ: 21.3.2001 ರಿಂದ ಜಾರಿಗೆ ಬರುವಂತೆ ಪ್ರಧಾನ ಕಾರ್ಯದರ್ಶಿ: ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಹುದ್ದೆ ಎಂದು ಪುನರ್ ಪದನಾಮೀಕರಿಸಲಾಗಿದೆ ಹಾಗೂ ಯಾವ ಯಾವ ಅವಧಿಗೆ ಸದರಿ ಹುದ್ದೆಯ ಪದಧಾರಕರು ಪ್ರಧಾನ ಕಾರ್ಯದರ್ಶಿ ಆಗಿರುವರೋ ಆಯಾ ಅವಧಿಗೆ ಮಾತ್ರ ಇವರ ಆಪ್ತ ಶಾಖೆಗೆ ಶಾಖಾಧಿಕಾರಿ ವೃಂದದ 1 ಆಪ್ತ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸಲಾಗಿದೆ.

ಕ್ರಮ ಸಂಖ್ಯೆ (10) ರಿಂದ (12) ರಲ್ಲಿರುವ ದಿನಾಂಕ: 23.05.2002, 13.3.2003, 28.2.2004ರ ಸರ್ಕಾರಿ ಆದೇಶಗಳಲ್ಲಿ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಹಾಗೂ ರಾಜಕೀಯ ವಿಶ್ರಾಂತಿ ವೇತನ) ಹುದ್ದೆಯನ್ನು ಪೂರಕ ಸಿಬ್ಬಂದಿಯೊಂದಿಗೆ ದಿನಾಂಕ: 1.4.2004 ರಿಂದ 31.3.2005 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

ಕ್ರಮ ಸಂಖ್ಯೆ (13)ರ ಅನಧಿಕೃತ ಟಿಪ್ಪಣಿಯಲ್ಲಿ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಇವರು ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಹುದ್ದೆ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳ ಅವಧಿಯನ್ನು ದಿನಾಂಕ: 31.3.2005ಕ್ಕೆ ಮುಕ್ತಾಯಗೊಂಡಿರುವುದರಿಂದ, ಸದರಿ ಹುದ್ದೆಗಳನ್ನು ಪುನಃ ಒಂದು ವರ್ಷದವರೆಗೆ ಮುಂದುವರೆಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 16 ಸಸಿವಿ 2005, ಬೆಂಗಳೂರು, ದಿನಾಂಕ: 26ನೇ ಮಾರ್ಚ್ 2005**

ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ ತರಬೇತಿ ಹಾಗೂ ರಾಜಕೀಯ ವಿಶ್ರಾಂತಿ ವೇತನ) ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿಯೊಂದಿಗೆ ದಿನಾಂಕ: 1.4.2005 ರಿಂದ 31.3.2006 ರವರೆವಿಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| | |
|---|---|
| ಆಪ್ತ ಕಾರ್ಯದರ್ಶಿ (ಆಪ್ತ ಕಾರ್ಯದರ್ಶಿ ಗ್ರೇಡ್-2/ ಪತ್ರಾಂಕಿತ ಆಪ್ತ ಸಹಾಯಕ) | 01 |
| ಶೀಘ್ರಲಿಪಿಗಾರರು (ಪತ್ರಾಂಕಿತ ಆಪ್ತ ಸಹಾಯಕರು) ಹಿರಿಯ ಶೀಘ್ರಲಿಪಿಗಾರರು | 02 |
| ಭಾಷಾಂತರಕಾರರು (ಶಾಖಾಧಿಕಾರಿ/ ಹಿರಿಯ ಸಹಾಯಕರು) | 01 |
| ಸಹಾಯಕರು (ಹಿರಿಯ ಸಹಾಯಕರು/ ಸಹಾಯಕರು) | 01 |
| ವಾಹನ ಚಾಲಕರು | 01 |
| ದಲಾಯತ್ | 02 |

ದಿನಾಂಕ: 10.7.1996ರ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ರನ್ವಯ ಆರ್ಥಿಕ ಸಹಮತಿಯನ್ನು ಪರಿಭಾವಿಸಿ ಮೇಲ್ಕಂಡ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.485

**ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** 2004-2005ನೇ ಸಾಲಿನಲ್ಲಿ ಮಂಜೂರಾದ 5 ಜಿಲ್ಲೆಗಳ ದೇವದಾಸಿ ಪುನರ್ವಸತಿ ಯೋಜನೆ ಅನುಷ್ಠಾನದ ಜಿಲ್ಲಾ ಘಟಕ ಕಚೇರಿಗಳಿಗೆ ಯೋಜನಾ ಅನುಷ್ಠಾನ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಕ್ರೋಢೀಕೃತ ವೇತನದ ವಿವಿಧ ಹುದ್ದೆಗಳನ್ನು ಭರ್ತಿ ಮಾಡಲು ಸಂದರ್ಶನ ಮತ್ತು ಆಯ್ಕೆ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂ: ಮಮಇ 106 ಮಅನಿ 2002. ದಿನಾಂಕ: 27.10.2005.

2. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಇವರ ಪತ್ರ ಸಂ: ಮನಿ/ದೇಪುಯೋ/40 2004-2005:3672 ದಿನಾಂಕ: 21.12.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ ಓದಲಾದ (1)ರ ಆದೇಶದಲ್ಲಿ ಸರ್ಕಾರವು 2004-2005ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮವು ರಾಯಚೂರು, ಕೊಪ್ಪಳ, ಬಳ್ಳಾರಿ, ಗುಲ್ಬರ್ಗಾ, ಮತ್ತು ಧಾರವಾಡ (ಗದಗ್ ಹಾಗೂ ಹಾವೇರಿ ಜಿಲ್ಲೆಗಳೂ ಸೇರಿದಂತೆ) 5 ಜಿಲ್ಲೆಗಳಲ್ಲಿ ದೇವದಾಸಿ ಪುನರ್ವಸತಿ ಯೋಜನೆ ಅನುಷ್ಠಾನಗೊಳಿಸಲು ಆಡಳಿತಾತ್ಮಕ ಮಂಜೂರಾತಿ ನೀಡಿದೆ ಹಾಗೂ ಈ ಘಟಕ ಕಚೇರಿಗಳಿಗೆ ಅವಶ್ಯವಿರುವ ಆಡಳಿತ ವ್ಯವಸ್ಥೆಯನ್ನು ಮಾಡಲು, ಜಿಲ್ಲಾವಾರು ವರ್ಷಕ್ಕೆ ಬೇಕಾಗುವ ಆಡಳಿತಾತ್ಮಕ ವೆಚ್ಚ ಮತ್ತು ಸಿಬ್ಬಂದಿಗಳನ್ನು ನೇಮಿಸಿಕೊಳ್ಳಲು ಹಾಗೂ ಸದರಿ ಕಚೇರಿಗಳಿಗೆ ಅವಶ್ಯವಾಗಿ ಬೇಕಾಗುವ ಪೀಠೋಪಕರಣಗಳನ್ನು ಖರೀದಿ ನಿಯಮಗಳನ್ನು ಅನುಸರಿಸಿ ಪಡೆಯಲು ಸರ್ಕಾರದ ಅನುಮತಿಯನ್ನು ನೀಡಿ ಆದೇಶ ಹೊರಡಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಇವರು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ವಿಷಯ ಸಮಿತಿಯು ದೇವದಾಸಿ ಮಹಿಳೆಯರಿಗೆ ಪುನರ್ವಸತಿ ಕಾರ್ಯಕ್ರಮವನ್ನು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ಮುಖಾಂತರವೇ ಎಲ್ಲಾ ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸಬೇಕೆಂದು ಶಿಫಾರಸ್ಸು ಮಾಡಿದ್ದರ ಮೇರೆಗೆ ಈ ಯೋಜನೆಯನ್ನು ಸಮಾಜ ಕಲ್ಯಾಣ ಇಲಾಖೆಯಿಂದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗೆ ವರ್ಗಾಯಿಸಲಾಗಿದೆ. ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ವ್ಯವಸ್ಥಾಪಕರು ಈ ಸಾಲಿನಲ್ಲಿ ಮಂಜೂರಾದ ಜಿಲ್ಲೆಗಳಿಗೆ ಈ ಯೋಜನೆಯ ಅನುಷ್ಠಾನಕ್ಕಾಗಿ ಬೇಕಾಗುವ ಸಿಬ್ಬಂದಿಯನ್ನು ಈ ಯೋಜನೆಯ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಕ್ರೋಢೀಕೃತ ವೇತನದಲ್ಲಿ ವಿವಿಧ ಹುದ್ದೆಗಳನ್ನು ಭರ್ತಿ ಮಾಡಲು ಸಂದರ್ಶನ ಸಮಿತಿಯನ್ನು ರೂಪಿಸಲು ಅನುಮೋದನೆಯನ್ನು ಕೋರಿರುತ್ತಾರೆ.

ಈ ಹುದ್ದೆಗಳ ಪೈಕಿ ಯೋಜನಾಧಿಕಾರಿಗಳ ಹುದ್ದೆಗೆ ಮಾತ್ರ ನಿಗಮದ ಕೇಂದ್ರ ಕಚೇರಿ, ಬೆಂಗಳೂರು ಇಲ್ಲಿ ಸಂದರ್ಶನವನ್ನು ಕರೆಯಲಾಗುವುದು ಹಾಗೂ ಉಳಿದ ಹುದ್ದೆಗಳಿಗೆ ಆಯಾ ಜಿಲ್ಲೆಗಳ ಯೋಜನಾ ಅನುಷ್ಠಾನ ಕಚೇರಿಗಳಲ್ಲಿ ಸಂದರ್ಶನವನ್ನು ಕರೆಯಲಾಗುವುದು ಎಂದು ತಿಳಿಸಿರುತ್ತಾರೆ. ಈ ರೀತಿ ಎಲ್ಲಾ ಹುದ್ದೆಗಳನ್ನು ಗುತ್ತಿಗೆ ಆಧಾರದ ಮೇಲೆ ಮತ್ತು ಕ್ರೋಢೀಕೃತ ವೇತನದಲ್ಲಿ ವಿವಿಧ ಹುದ್ದೆಗಳನ್ನು ಭರ್ತಿ ಮಾಡಲು ಸಂದರ್ಶನ ಮತ್ತು ಆಯ್ಕೆ ಸಮಿತಿಗಳನ್ನು ರಚಿಸಲು ಅನುಮತಿಯನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ: ಮಮಇ 18 ಎಸ್‌ಜೆಡಿ 2005 ಬೆಂಗಳೂರು ದಿನಾಂಕ: 7ನೇ ಮಾರ್ಚ್ 2005**

ವ್ಯವಸ್ಥಾಪಕ ನಿರ್ದೇಶಕರು ಮೇಲೆ ನೀಡಿರುವ ಕಾರಣಗಳ ಹಿನ್ನೆಲೆಯಲ್ಲಿ 2004-2005ನೇ ಸಾಲಿನಲ್ಲಿ ಮಂಜೂರಾದ ಕೊಪ್ಪಳ, ರಾಯಚೂರು, ಬಳ್ಳಾರಿ, ಗುಲ್ಬರ್ಗಾ ಮತ್ತು ಧಾರವಾಡ (ಹಾವೇರಿ, ಗದಗ್ ಜಿಲ್ಲೆಗಳೂ ಸೇರಿದಂತೆ) ಈ 5 ಜಿಲ್ಲೆಗಳ ದೇವದಾಸಿ ಪುನರ್ವಸತಿ ಯೋಜನೆ ಅನುಷ್ಠಾನದ ಜಿಲ್ಲಾ ಘಟಕ ಕಚೇರಿಗಳಲ್ಲಿ ಗುತ್ತಿಗೆ ಆಧಾರದ ಮೇಲೆ ಕ್ರೋಢೀಕೃತ ವೇತನದಲ್ಲಿ ವಿವಿಧ ಹುದ್ದೆಗಳನ್ನು ಭರ್ತಿ ಮಾಡಲು, ಸಂದರ್ಶನ ಮತ್ತು ಆಯ್ಕೆ ಸಮಿತಿಗಳನ್ನು ಈ ಕೆಳಗೆ ಕಾಣಿಸಿದ ಅಧಿಕಾರಿಗಳನ್ನು ಒಳಗೊಂಡಂತೆ ರಚಿಸಲು ಅನುಮತಿಯನ್ನು ನೀಡಲಾಗಿದೆ.

**1) ಯೋಜನಾಧಿಕಾರಿಗಳ ಹುದ್ದೆ (ಆಯ್ಕೆ ಸಮಿತಿ):**

1) ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

2) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ

3) ಪ್ರಧಾನ ವ್ಯವಸ್ಥಾಪಕರು-1, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ

4) ಸಮಾಜ ಕಲ್ಯಾಣ ಇಲಾಖೆಯ ಪ್ರತಿನಿಧಿ

5) ಒಬ್ಬ ವಿಷಯ ಪರಿಣಿತರು.

**2) ಉಳಿದ ಹುದ್ದೆಗಳಿಗೆ ಆಯ್ಕೆಗಾಗಿ (ಜಿಲ್ಲಾ ಮಟ್ಟದ ಆಯ್ಕೆ ಸಮಿತಿ):**

1) ಪ್ರಧಾನ ವ್ಯವಸ್ಥಾಪಕರು-1, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ.

2) ಆಯಾಯ ಜಿಲ್ಲೆಯ ಜಿಲ್ಲಾ ಯೋಜನಾಧಿಕಾರಿ, ದೇವದಾಸಿ ಪುನರ್ವಸತಿ ಯೋಜನೆ

3) ಜಿಲ್ಲೆಯ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

4) ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.443

**ಪ್ರ.ದ. ಸಿದ್ಧಾಂತಿ**

ಸರ್ಕಾರದ ಅಧೀನ ಕಾರ್ಯದರ್ಶಿ-2,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಶಿಕ್ಷಣ ಸಚಿವಾಲಯ

## ಅಧಿಕೃತ ಜ್ಞಾಪನ

**ಸಂಖ್ಯೆ: ಇಡಿ 38 ಪಿಎಂಎ 2005 ಬೆಂಗಳೂರು, ದಿನಾಂಕ: 24ನೇ ಮಾರ್ಚ್ 2005**

**ವಿಷಯ :** 2005-06ನೇ ಸಾಲಿಗೆ ರಾಜ್ಯದ ಪ್ರಾಥಮಿಕ ಹಾಗೂ ಪ್ರೌಢಶಾಲೆಗಳಿಗೆ ತ್ರೈಮಾಸಿಕ ಅವಧಿಗಳು ಮತ್ತು ದೀರ್ಘ ರಜೆಗಳನ್ನು ನಿಗದಿ ಮಾಡುವ ಬಗ್ಗೆ.

**ಉಲ್ಲೇಖ :** ನಿರ್ದೇಶಕರು (ಪ್ರೌಢಶಿಕ್ಷಣ), ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಸಿ4(6) ರಜೆ/24/ 01-02, ದಿನಾಂಕ: 07.03.2005.

ರಾಜ್ಯದಲ್ಲಿನ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಿಗೆ 2005-06ನೇ ಸಾಲಿಗೆ ತ್ರೈಮಾಸಿಕ ಅವಧಿಗಳು, ಮಧ್ಯಂತರ ರಜೆ ಹಾಗೂ ಬೇಸಿಗೆ ರಜೆಗಳನ್ನು ನಿಗದಿಪಡಿಸುವ ಬಗ್ಗೆ ಉಲ್ಲೇಖಿತ ಪತ್ರದಲ್ಲಿ ನಿರ್ದೇಶಕರು (ಪ್ರೌಢ ಶಿಕ್ಷಣ), ಸಾರ್ವಜನಿಕ ಶಿಕ್ಷಣ ಇಲಾಖೆ, ಇವರಿಂದ ಬಂದಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗೆ ಸೂಚಿಸಿರುವ ರೀತ್ಯಾ ಆದೇಶಿಸಿದೆ.

| | | |
|---|---|---|
| 1) | ಮೊದಲನೇ ತ್ರೈಮಾಸಿಕ ಅವಧಿ | - ದಿನಾಂಕ: 01.07.2005 ರಿಂದ 02.10.2005 ರವರೆಗೆ |
| 2) | ಮಧ್ಯಂತರ ರಜೆ | - ದಿನಾಂಕ: 03.10.2005 ರಿಂದ 13.10.2005 ರವರೆಗೆ |
| 3) | ಎರಡನೇ ತ್ರೈಮಾಸಿಕ ಅವಧಿ | - ದಿನಾಂಕ: 14.10.2005 ರಿಂದ 24.12.2005 ರವರೆಗೆ |
| 4) | ಮಧ್ಯಂತರ ರಜೆ | - ದಿನಾಂಕ: 25.12.2005 ರಿಂದ 31.12.2005 ರವರೆಗೆ |
| 5) | ಮೂರನೇ ತ್ರೈಮಾಸಿಕ ಅವಧಿ | - ದಿನಾಂಕ: 01.01.2006 ರಿಂದ 10.04.2006 ರವರೆಗೆ |
| 6) | ಬೇಸಿಗೆ ರಜೆ | - ದಿನಾಂಕ: 11.04.2006 ರಿಂದ 29.05.2006 ರವರೆಗೆ |

ವಿಸೂ: ಶಾಲೆಗಳ ಒಟ್ಟಾರೆ ಮಧ್ಯಂತರ ರಜಾ ದಿನಗಳು ಹೆಚ್ಚಾಗದ ಷರತ್ತಿಗೊಳಪಡಿಸಿ, ಮಧ್ಯಂತರ ರಜೆಗಳನ್ನು ಮಾತ್ರ ಸ್ಥಳೀಯ ಅವಶ್ಯಕತೆಗೆ ಅನುಗುಣವಾಗಿ ಬದಲಾವಣೆ ಮಾಡಿಕೊಳ್ಳಲು ಸಂಬಂಧಪಟ್ಟ ಜಿಲ್ಲಾ ಪಂಚಾಯಿತಿಗಳಿಗೆ ಅಧಿಕಾರವಿರುತ್ತದೆ; ಇಂತಹ ಬದಲಾವಣೆಯ ಅವಶ್ಯಕತೆ ಇಲ್ಲದಿದ್ದಲ್ಲಿ ಸದರಿ ಅಧಿಕೃತ ಜ್ಞಾಪನದಲ್ಲಿ ನಿಗದಿಪಡಿಸಲಾದ ಮಧ್ಯಂತರ ರಜೆ ದಿನಗಳೇ ಅನ್ವಯಿಸುತ್ತವೆ.

**ಬಿ. ಹೆಚ್. ಪಡಸಲಗಿ**

ಪಿ.ಆರ್.482

ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಪಿ. ಹೆಚ್. ಕೊಲ್ಹಾರ್, ನಿವೃತ್ತ ಅಧೀನ ಕಾರ್ಯದರ್ಶಿ, (ಸ್ವತಂತ್ರ ಪ್ರಭಾರ), ಕರ್ನಾಟಕ ಸರ್ಕಾರ ಸಚಿವಾಲಯ, ಇವರ ಜಾತಿಯ ಪರಿಶೀಲನೆ- ಆದೇಶ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಡಿ 713 ಎಸ್‌ಎಡಿ 93, ದಿನಾಂಕ: 11.3.2002.
2. ಅಧ್ಯಕ್ಷರು, ಕರ್ನಾಟಕ ರಾಜ್ಯ ದಲಿತ ಪರಿಷತ್, ಬೆಂಗಳೂರು, ಇವರ ಪತ್ರ ದಿನಾಂಕ: 6.1.2003.
3. ಇದೇ ಸಂಖ್ಯೆಯ ದಿನಾಂಕ: 3.2.2004ರ ಸರ್ಕಾರಿ ಪತ್ರ.
4. ಬಾಗಲಕೋಟೆ ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ದಂಡಾಧಿಕಾರಿಗಳು, ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಜಿಅಬಾ: ಜಿಸಕಅ:ಜಾಪ:ಪಿಎಚ್‌ಕೋ:ಸಿಆರ್:2004-05, ದಿನಾಂಕ: 17.1.2005.

**ಪ್ರಸ್ತಾವನೆ:**

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ, ಅಧ್ಯಕ್ಷರು, ಕರ್ನಾಟಕ ರಾಜ್ಯ ದಲಿತ ಪರಿಷತ್, ಬೆಂಗಳೂರು, ಇವರು, ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಪರಿಶಿಷ್ಟ ವರ್ಗಕ್ಕೆ ಸೇರಿದ ಕೆಲವು ಪಂಗಡಗಳಿಗೆ ಮೀಸಲಾತಿ ಸೌಲಭ್ಯವನ್ನು ಕೇವಲ ವ್ಯಾಸಂಗಕ್ಕೆ ಮಾತ್ರ ನೀಡಲಾಗಿದ್ದು, ಸರ್ಕಾರದ ನೇಮಕಾತಿ ಮತ್ತು ಬಡ್ತಿ ಹೊಂದುವಲ್ಲಿ ಈ ಸೌಲಭ್ಯವನ್ನು ರದ್ದುಪಡಿಸಿರುವುದನ್ನು ಉಲ್ಲೇಖಿಸಿ, ಶ್ರೀ ಪಿ. ಹೆಚ್. ಕೊಲ್ಹಾರ್, ಪ್ರಸ್ತುತ ನಿವೃತ್ತ ಅಧೀನ ಕಾರ್ಯದರ್ಶಿ (ಸ್ವತಂತ್ರ ಪ್ರಭಾರ), ಇವರು ಮೀಸಲಾತಿ ಸೌಲಭ್ಯವನ್ನು ಪಡೆಯುವಲ್ಲಿನ ಅರ್ಹತೆಯನ್ನು ಪರಿಶೀಲಿಸಬೇಕೆಂದು ಕೋರಿರುತ್ತಾರೆ. ಈ ಹಿನ್ನೆಲೆಯಲ್ಲಿ, ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ, ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ದಂಡಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ, ಇವರಿಂದ ವಿವರವಾದ ವರದಿಯನ್ನು ಕೋರಲಾಗಿದ್ದು, ಶ್ರೀ ಪಿ. ಹೆಚ್. ಕೊಲ್ಹಾರ್, ಇವರ ಜಾತಿಯು "ಟೋಕ್ರಿ ಕೋಳಿ" ಅಲ್ಲವೆಂದು ಸ್ಪಷ್ಟವಾಗಿರುವುದರಿಂದ, ಇವರಿಗೆ ಪರಿಶಿಷ್ಟ ಪಂಗಡದ ಯಾವುದೇ ಮೀಸಲಾತಿ ಸೌಲಭ್ಯವನ್ನು ನೀಡಲು ಬರುವುದಿಲ್ಲವೆಂದು ಉಲ್ಲೇಖ (4)ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು ತಿಳಿಸಿರುತ್ತಾರೆ. ಪ್ರಸ್ತಾವನೆಯನ್ನು, ಉಲ್ಲೇಖಿತ ದಿನಾಂಕ: 11.3.2002ರ ಆದೇಶದಂತೆ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಆದೇಶ ಸಂಖ್ಯೆ: ಸಿಆಸುಇ 118 ಸಿಶಾಸೇ 2005, ಬೆಂಗಳೂರು, ದಿನಾಂಕ: 30ನೇ ಮಾರ್ಚ್ 2005**

ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಡಿ 713 ಎಸ್‌ಎಡಿ 93, ದಿನಾಂಕ: 11.3.2002ರಲ್ಲಿನ ಸೂಚನೆಗಳನ್ವಯ, ಶ್ರೀ ಪಿ. ಹೆಚ್. ಕೊಲ್ಹಾರ್, ನಿವೃತ್ತ ಅಧೀನ ಕಾರ್ಯದರ್ಶಿ (ಸ್ವತಂತ್ರ ಪ್ರಭಾರ), ಕರ್ನಾಟಕ ಸರ್ಕಾರ ಸಚಿವಾಲಯ, ಇವರು, ದಿನಾಂಕ: 11.3.2002 ರಿಂದ ಜಾರಿಗೆ ಬರುವಂತೆ ಸಾಮಾನ್ಯ ವರ್ಗಕ್ಕೆ ಸೇರಿದವರೆಂದು ಪರಿಗಣಿಸಲಾಗಿದೆ ಹಾಗೂ ಅದರಂತೆ ಸೇವಾ ಸೌಲಭ್ಯಗಳಿಗೆ ಅರ್ಹರಾಗುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.486

**ಎಸ್. ನಳಿನಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸಿಬ್ಬಂದಿ).

## ಸಾರಿಗೆ ಸಚಿವಾಲಯ

**ವಿಷಯ :** ಐ.ಪಿ.ಎಸ್ ನಲ್ಲಿ ಎಕ್ಸ್ ಹುದ್ದೆಯಾದ ಸಾರಿಗೆ ಆಯುಕ್ತರ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**
1. ಸಿ.ಆ.ಸು.ಇ (ಸೇವೆಗಳು-1) ಇವರ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 70 ಎಸ್‌ಪಿಎಸ್ 2004, ದಿನಾಂಕ:26.7.04.
2. ಸಿ.ಆ.ಸು.ಇ (ಸೇವೆಗಳು-1) ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 70 ಸೆಪೋಸೆ 2004, ದಿನಾಂಕ: 01.09.2004.
3. ಸಿಆಸುಇ (ಸೇವೆಗಳು) ಇವರ ಹಿಂಬರಹದ ಸಂಖ್ಯೆ: ಸಿಆಸುಇ 70 ಸೆಪೋಸೆ 2004 ದಿನಾಂಕ: 30.10.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿ ಶ್ರೀ ಓಂಪ್ರಕಾಶ್, ಭಾ.ಪೋ.ಸೇ ಇವರನ್ನು ಸಾರಿಗೆ ಆಯುಕ್ತರನ್ನಾಗಿ ನೇಮಿಸಿ ವರ್ಗಾಯಿಸಲಾಗಿದೆ.

ಶ್ರೀ ಓಂಪ್ರಕಾಶ್ ರವರು ತಮ್ಮ ಹೊಸ ಹುದ್ದೆಯಲ್ಲಿ ಸಂಬಳ ಮತ್ತು ಇತರ ಭತ್ಯೆಗಳನ್ನು ಪಡೆಯಲು ಅನುಕೂಲವಾಗುವಂತೆ ಐಎಎಸ್‌ನ ಕೇಡರ್ ಹುದ್ದೆಯಾದ ಸಾರಿಗೆ ಆಯುಕ್ತರ ಹುದ್ದೆಯನ್ನು ನಿಲಂಬನೆಯಲ್ಲಿಟ್ಟು (Abeyance) ಐಪಿಎಸ್ ವೇತನ ಶ್ರೇಣಿಯಲ್ಲಿ ಸಾರಿಗೆ ಆಯುಕ್ತರ ಒಂದು

ತಾತ್ಕಾಲಿಕ Ex-Cadre ಹುದ್ದೆಯನ್ನು ಸೃಜಿಸುವ ಅಗತ್ಯವಿದೆ. ಆದ್ದರಿಂದ, ಶ್ರೀ ಓಂಪ್ರಕಾಶ್ ಐಪಿಎಸ್ ರವರು ಸಾರಿಗೆ ಆಯುಕ್ತರ ಹುದ್ದೆಯಲ್ಲಿ ಅಧಿಕಾರ ವಹಿಸಿಕೊಂಡ ದಿನಾಂಕದಿಂದ ಒಂದು ವರ್ಷದ ಅವಧಿಗೆ ಅಥವಾ ಈಗಿರುವ ಐಪಿಎಸ್ ಅಧಿಕಾರಿ ಸದರಿ ಹುದ್ದೆಯಲ್ಲಿ ಮುಂದುವರೆಯುವವರೆಗೆ ಇವುಗಳಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ಐಪಿಎಸ್ ಸೂಪರ್ ಟೈಮ್ ವೇತನ ಶ್ರೇಣಿ ರೂ. 18400-500-22400 ರಲ್ಲಿ ಒಂದು ತಾತ್ಕಾಲಿಕ ಸಾರಿಗೆ ಆಯುಕ್ತರ ಹುದ್ದೆಯನ್ನು ಸೃಜಿಸಿ ಆದೇಶ ಹೊರಡಿಸುವ ಬಗ್ಗೆ ಅಗತ್ಯ ಕ್ರಮಕೈಗೊಳ್ಳುವಂತೆ ಒಳಾಡಳಿತ ಮತ್ತು ಸಾರಿಗೆ ಇಲಾಖೆಯನ್ನು ಸಿ.ಆ.ಸು.ಇ (ಸೇವೆಗಳು-1) ಇವರು ಕೋರಿರುತ್ತಾರೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಾರಿಇ 207 ಸಾಇಸೆ 2004 ದಿನಾಂಕ: 29ನೇ ಮಾರ್ಚ್ 2005**

**(ಯೂನಿಕ್ ಕ್ರಮ ಸಂಖ್ಯೆ: 98/2005 ದಿನಾಂಕ:29.03.2005)**

ಶ್ರೀ ಓಂಪ್ರಕಾಶ್ ಐಪಿಎಸ್ ರವರು ಸಾರಿಗೆ ಆಯುಕ್ತರ ಹುದ್ದೆಯಲ್ಲಿ ಅಧಿಕಾರ ವಹಿಸಿಕೊಂಡ ದಿನಾಂಕದಿಂದ ಒಂದು ವರ್ಷದ ಅವಧಿಗೆ ಅಥವಾ ಈಗಿರುವ ಐಪಿಎಸ್ ಅಧಿಕಾರಿ ಸದರಿ ಹುದ್ದೆಯಲ್ಲಿ ಮುಂದುವರೆಯುವವರೆಗೆ ಇವುಗಳಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ಐಪಿಎಸ್ ಸೂಪರ್ ಟೈಮ್ ವೇತನ ಶ್ರೇಣಿ ರೂ. 18400-500-22400 ರಲ್ಲಿ ಒಂದು ತಾತ್ಕಾಲಿಕ ಸಾರಿಗೆ ಆಯುಕ್ತರ Ex-Cadre ಹುದ್ದೆಯನ್ನು ಸೃಜಿಸಿ ಆದೇಶಿಸಲಾಗಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 2000 ವೆಚ್ಚ-6/2004 ದಿನಾಂಕ: 14.02.2005ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.492

**ಬಿ. ವಾಸುದೇವ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಾರಿಗೆ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಎಂ. ಪುಟ್ಟಸ್ವಾಮಿ, ಹಿಂದಿನ ಹಿರಿಯ ಉಪ ನೋಂದಣಾಧಿಕಾರಿ, ಬಸವೇಶ್ವರ ನಗರ, ಬೆಂಗಳೂರು ಉತ್ತರ ತಾಲ್ಲೂಕು, ಮತ್ತು ಹಾಲಿ ಹಿರಿಯ ಉಪ ನೋಂದನಾಧಿಕಾರಿ, ನೆಲಮಂಗಲ ಬೆಂಗಳೂರು(ಗ್ರಾ) ಇವರ ವಿರುದ್ಧ ದಾಖಲಾದ ಟ್ರಾಪ್ ಪ್ರಕರಣದ ಬಗ್ಗೆ ಕಾನೂನು ಕ್ರಮ ಜರುಗಿಸಲು ಮಂಜೂರಾತಿ ಕುರಿತು.

**ಓದಲಾಗಿದೆ :**

1. ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರಸಂಖ್ಯೆ: ಲೋಕ್/ ಐಎನ್‌ವಿ (ಜಿ)/ಸಿಟಿ/ಕ್ರೈಂ:36/2002, ದಿನಾಂಕ: 28.10.2003.
2. ಸರ್ಕಾರದ ಸಮ ಸಂಖ್ಯೆ ಆದೇಶದ ದಿನಾಂಕ: 2.8.04.
3. ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರಸಂಖ್ಯೆ: ಲೋಕ್/ ಐಎನ್‌ವಿ(ಜಿ) ಸಿಟಿ/ಕ್ರೈಂ.36/2002, ದಿನಾಂಕ: 16.09.2002.

**ಪ್ರಸ್ತಾವನೆ:**

ಶ್ರೀ ಎಂ. ಪುಟ್ಟಸ್ವಾಮಿ, ಹಿಂದಿನ ಹಿರಿಯ ಉಪ ನೋಂದಣಾಧಿಕಾರಿ, ಬಸವೇಶ್ವರ ನಗರ, ಬೆಂಗಳೂರು ಉತ್ತರ ತಾಲ್ಲೂಕು ಹಾಗೂ ಹಾಲಿ ಹಿರಿಯ ಉಪನೋಂದಣಾಧಿಕಾರಿ, ನೆಲಮಂಗಲ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರ ವಿರುದ್ಧ ಗುನ್ನೆ ಸಂಖ್ಯೆ: ಲೋಕ್ ಐ.ಎನ್.ವಿ. (ಜಿ)/ಸಿಟಿ/ ಕ್ರೈಂ.36/2002, ರಲ್ಲಿ ಆರಕ್ಷಕ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ (1)ರ ಪ್ರಸ್ತಾವನೆಯಲ್ಲಿ ಆಪಾದಿತರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ, 1988ರ ಕಲಂ 7(13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2)ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನ ಕಾಯ್ದೆ 1988ರ ಕಲಂ 19(1)ರನ್ವಯ ಮಂಜೂರಾತಿಯನ್ನು ನೀಡುವಂತೆ ಕೋರಿದ್ದು, ಮೇಲೆ ಓದಲಾದ-(2)ರ ಸರ್ಕಾರಿ ಆದೇಶದಲ್ಲಿ ಶ್ರೀ ಎಂ. ಪುಟ್ಟಸ್ವಾಮಿ, ಹಿಂದಿನ ಹಿರಿಯ ಉಪ ನೋಂದಣಾಧಿಕಾರಿ, ಇವರನ್ನು ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ಆದೇಶವನ್ನು ನೀಡಲಾಗಿತ್ತು.

ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಮೇಲೆ (3)ರಲ್ಲಿ ಓದಲಾದ ಪ್ರಸ್ತಾವನೆಯಲ್ಲಿ ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶವು ದೋಷಪೂರ್ಣವಾಗಿದ್ದು, ಇಂತಹ ಆದೇಶದ ನಕಲಿ ಪ್ರತಿಗಳನ್ನು ನ್ಯಾಯಾಲಯವು ಪರಿಗಣಿಸುವುದಿಲ್ಲವಾದ್ದರಿಂದ ಸಕ್ಷಮ ಪ್ರಾಧಿಕಾರಿಯ ಶಾಹಿ ಸಹಿ ಹಾಗೂ ಕಛೇರಿಯ ಮೊಹರನ್ನು ಒಳಗೊಂಡ ದೋಷರಹಿತವಾದ ಮಂಜೂರಾತಿ ಆದೇಶವನ್ನು ಲೋಕಾಯುಕ್ತರ ಕಛೇರಿಯಿಂದ ಕಳುಹಿಸಿಕೊಟ್ಟಿರುವ ಆದೇಶ ಪತ್ರದ ನಮೂನೆ ಪ್ರಕಾರ ಮಂಜೂರಾತಿ ಅದೇಶ ಪತ್ರವನ್ನು ಕಳುಹಿಸಿಕೊಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ (3)ರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿದ್ದು, ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶವನ್ನು ರದ್ದುಪಡಿಸಲು ಹಾಗೂ ಪರಿಷ್ಕೃತ ಆದೇಶ ಹೊರಡಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 65 ಮುನೋಸೇ (2) 2003, ಬೆಂಗಳೂರು, ದಿನಾಂಕ: 29ನೇ ಮಾರ್ಚ್ 2005**

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಕಂಇ 65 ಮುನೋಸೇ (2) 2003, ದಿನಾಂಕ: 2.8.2004ನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.495

**ಎಂ. ಪಿ. ಮಂಜುನಾಥ್**

ಪೀಠಾಧಿಕಾರಿ,

ಕಂದಾಯ ಇಲಾಖೆ

(ನೋಂದಣಿ ಮತ್ತು ಮುದ್ರಾಂಕ).

## ತಿದ್ದುಪಡಿ

### ಸಂಖ್ಯೆ: ಕಂಇ 30 ಎಲ್‌ಆರ್‌ಎಂ 2005 ಬೆಂಗಳೂರು, ದಿನಾಂಕ: 30ನೇ ಮಾರ್ಚ್ 2005

ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 93 ಎಲ್‌ಆರ್‌ಎಂ 2002 ದಿನಾಂಕ: 10.12.2002 ರ ಎರಡನೇ ಸಾಲಿನಲ್ಲಿ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಶ್ರೀಗಂಧದ ಕಾವಲ್ ಗ್ರಾಮದ ಸ.ನಂ. 23/1 ರಲ್ಲಿ "0.30 ಗುಂಟೆ" ಬದಲಾಗಿ "0.10 ಗುಂಟೆ" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.500

**ಕೆ. ನರಸಿಂಹಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ, (ಭೂ ಸುಧಾರಣೆ).

## ಶಿಕ್ಷಣ ಸಚಿವಾಲಯ

**ವಿಷಯ :** ಎಸ್.ಎಸ್.ಎಲ್.ಸಿ.ಯು ಪರೀಕ್ಷೆಯ ಕೆಲವು ಭಾಷಾ ಪತ್ರಿಕೆಗಳ ಮೌಲ್ಯಮಾಪನದಲ್ಲಿ ಕೃಪಾಂಕ ನೀಡುವ ವಾಡಿಕೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**

1. ದಿನಾಂಕ: 29.04.1994 ರ ಸರ್ಕಾರದ ಆದೇಶ ಸಂಖ್ಯೆ: ಇಡಿ 28 ಪಿಜಿಸಿ 1994.
2. ದಿನಾಂಕ: 03.08.1996 ಮತ್ತು 29.08.1996 ರ ಸರ್ಕಾರದ ಆದೇಶ ಸಂಖ್ಯೆ: ಇಡಿ 32 ಪಿಜಿಸಿ 1996.
3. ನಿರ್ದೇಶಕರು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು, ಇವರ ದಿನಾಂಕ: 15.09.2004ರ ಪತ್ರ ಸಂಖ್ಯೆ: ಎ8 ಇತರೆ- ಏಪ್ರಿಲ್ 91-92.
4. ನಿರ್ದೇಶಕರು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು, ಇವರ ದಿನಾಂಕ: 13.12.2004ರ ಅ.ಸ. ಪತ್ರ ಸಂಖ್ಯೆ ನಿ(ಆಶಾ) ಭಾ.ಕೃ 01/2004.
5. ಸರ್ಕಾರದ ದಿನಾಂಕ: 19.02.2005ರ ಪತ್ರ ಸಂಖ್ಯೆ ಇಡಿ 216 ಪಿಜಿಸಿ 2004.
6. ನಿರ್ದೇಶಕರು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು, ಇವರ ದಿನಾಂಕ: 03.03.2005ರ ಪತ್ರ ಸಂಖ್ಯೆ: ನಿ(ಆಶಾ) ಭಾ.ಕೃ 1/2004 (ಎ8 ಇತರೆ-ಏಪ್ರಿಲ್ 92/91-92).

**ಪ್ರಸ್ತಾವನೆ:**

1. ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 29.04.1994ರ ಸರ್ಕಾರದ ಆದೇಶದನ್ವಯ, ಶಿಕ್ಷಣದಲ್ಲಿ ಭಾಷಾ ನೀತಿಯ ವಿಷಯಕ್ಕೆ ಸಂಬಂಧಿಸಿದ ಹಿಂದಿನ ಎಲ್ಲಾ ಆದೇಶಗಳನ್ನು ಹಾಗೂ ದಿನಾಂಕ 22.04.94ರ ಆದೇಶ ಸಂಖ್ಯೆ ಇಡಿ 28 ಪಿಜಿಸಿ 94ನ್ನು ರದ್ದುಗೊಳಿಸಿ, ದಿನಾಂಕ: 8ನೇ ಡಿಸೆಂಬರ್ 1993ರ ಸರ್ವೋಚ್ಚ ನ್ಯಾಯಾಲಯದ ತೀರ್ಪಿನ ಆಧಾರದ ಮೇರೆಗೆ, ಪ್ರಾಥಮಿಕ ಹಾಗೂ ಪ್ರೌಢಶಾಲೆಗಳಲ್ಲಿ 1994-95ನೇ ಶೈಕ್ಷಣಿಕ ವರ್ಷದಿಂದ ಅನ್ವಯವಾಗುವ ಭಾಷಾ ನೀತಿಯನ್ನು ನಿಗದಿಪಡಿಸಲಾಗಿದೆ. ಆ ಆದೇಶದ ಕ್ರಮ ಸಂಖ್ಯೆ 'ಊ' ರ ಭಾಗ ಈ ಕೆಳಕಂಡಂತಿದೆ.

> "ಕನ್ನಡ ಮಾತೃಭಾಷೆಯಲ್ಲದ ವಿದ್ಯಾರ್ಥಿಗಳಿಗೆ ಕನ್ನಡ ಭಾಷಾ ಪರೀಕ್ಷೆಯಲ್ಲಿ ಮತ್ತು ಹಿಂದಿ ಮಾತೃ ಭಾಷೆಯಲ್ಲದ ವಿದ್ಯಾರ್ಥಿಗಳಿಗೆ ಹಿಂದಿ ಭಾಷಾ ಪರೀಕ್ಷೆಯಲ್ಲಿ ಕೃಪಾಂಕ ನೀಡತಕ್ಕದ್ದು. ಈ ಭಾಷೆಗಳಲ್ಲಿ ವಿದ್ಯಾರ್ಥಿಗಳು ಉತ್ತೀರ್ಣರಾಗಲು ಅನುಕೂಲವಾಗುವಂತೆ ಗರಿಷ್ಠ 15 ಅಂಕದವರೆಗೆ ಕೃಪಾಂಕ ನೀಡತಕ್ಕದ್ದು. ಈ ಸೌಲಭ್ಯವು ಆದೇಶ ಹೊರಡಿಸಿದ ದಿನಾಂಕದಿಂದ 10 ವರ್ಷಗಳವರೆಗೆ ದೊರೆಯುವುದು"

2. ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ: 29.08.96ರ ಸರ್ಕಾರದ ಆದೇಶದನ್ವಯ, 1996-97ನೇ ಶೈಕ್ಷಣಿಕ ವರ್ಷದಿಂದ ಪ್ರೌಢಶಾಲಾ ಹಂತದಲ್ಲಿ ಅನುಸರಿಸಬೇಕಾದ ಭಾಷಾ ನೀತಿಗೆ ಸಂಬಂಧಿಸಿದ ದಿನಾಂಕ: 03.08.96ರ ಆದೇಶ ಸಂಖ್ಯೆ: ಇಡಿ 32 ಪಿಜಿಸಿ 96, ರ (ಇ) ಭಾಗವನ್ನು ಮಾರ್ಪಡಿಸಿ ಕೆಳಕಂಡಂತೆ ಭಾಷಾ ನೀತಿಯನ್ನು ಅನುಸರಿಸತಕ್ಕದೆಂದು ಸರ್ಕಾರವು ಆದೇಶಿಸಿದೆ.

> "ಹಾಲಿ ಜಾರಿಯಲ್ಲಿರುವಂತೆ ಕನ್ನಡ ಮಾತೃ ಭಾಷೆಯಲ್ಲದ ವಿದ್ಯಾರ್ಥಿಗಳಿಗೆ ಕನ್ನಡ ಭಾಷೆ ಪರೀಕ್ಷೆಯಲ್ಲಿ ಮತ್ತು ಹಿಂದಿ ಮಾತೃಭಾಷೆಯಲ್ಲದ ವಿದ್ಯಾರ್ಥಿಗಳಿಗೆ ಹಿಂದಿ ಭಾಷೆ ಪರೀಕ್ಷೆಯಲ್ಲಿ ತೇರ್ಗಡೆಯಾಗಲು ಕೃಪಾಂಕ ನೀಡುವುದನ್ನು ಮುಂದುವರಿಸತಕ್ಕದು. ಹಾಗೆಯೇ ಇಂಗ್ಲೀಷ್ ಮಾತೃಭಾಷೆಯಲ್ಲದ ವಿದ್ಯಾರ್ಥಿಗಳಿಗೆ ಇಂಗ್ಲೀಷ್ ತೇರ್ಗಡೆಯಾಗಲು ಕೃಪಾಂಕ ನೀಡತಕ್ಕದು. ಈ ಎಲ್ಲಾ ಭಾಷೆಗಳಲ್ಲಿ ವಿದ್ಯಾರ್ಥಿಗಳಲ್ಲಿ ಉತ್ತೀರ್ಣರಾಗಲು ಅನುಕೂಲವಾಗುವಂತೆ ಗರಿಷ್ಠ 15 ಅಂಕಗಳನ್ನು ಕೃಪಾಂಕ ನೀಡುವುದು."

3. ನಿರ್ದೇಶಕರು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಮಲ್ಲೇಶ್ವರಂ, ಬೆಂಗಳೂರು ಇವರು ಮೇಲೆ (3)ರಲ್ಲಿ ಓದಲಾದ ದಿನಾಂಕ: 15.09.2004ರ ಪತ್ರದನ್ವಯ ಈ ಕೆಳಗೆ ಉದ್ಧರಿಸಿದಂತೆ ಪ್ರಸ್ತಾಪಿಸಿರುತ್ತಾರೆ.

> "10ನೇ ತರಗತಿ ಪಬ್ಲಿಕ್ ಪರೀಕ್ಷೆಯಲ್ಲಿ ಕನ್ನಡ ಮಾತೃ ಭಾಷೆಯಲ್ಲದ ವಿದ್ಯಾರ್ಥಿಗಳಿಗೆ ಕನ್ನಡ ಭಾಷಾ ಪರೀಕ್ಷೆಯಲ್ಲಿ, ಹಿಂದಿ ಮಾತೃ ಭಾಷೆಯಲ್ಲದ ವಿದ್ಯಾರ್ಥಿಗಳಿಗೆ ಹಿಂದಿ ಭಾಷೆಯಲ್ಲಿ ಮತ್ತು ಇಂಗ್ಲೀಷ್ ಮಾತೃ ಭಾಷೆಯಲ್ಲದ ವಿದ್ಯಾರ್ಥಿಗಳಿಗೆ ಇಂಗ್ಲೀಷ್ ಭಾಷೆಯಲ್ಲಿ ತೇರ್ಗಡೆಯಾಗಲು ಅನುಕೂಲವಾಗುವಂತೆ ಗರಿಷ್ಠ 15 ಅಂಕಗಳ ಕೃಪಾಂಕ ನೀಡಲು ಆದೇಶಿಸಿದ್ದು, ಈ ಆದೇಶವು ಆದೇಶ ಹೊರಡಿಸಿದ ದಿನಾಂಕ: 29.04.1994 ರಿಂದ 10 ವರ್ಷಗಳ ಕಾಲ ದೊರೆಯುವುದೆಂದು ಆದೇಶಿಸಿದ್ದು, ಅದು 2003-04ನೇ ಶೈಕ್ಷಣಿಕ ವರ್ಷಕ್ಕೆ ಮುಕ್ತಾಯಗೊಂಡಿರುತ್ತದೆ.

ಈ 10 ವರ್ಷಗಳ ನಂತರವೂ ಸರ್ಕಾರದ ಭಾಷಾ ನೀತಿ ಬದಲಾವಣೆ ಆಗದೆ ಇರುವುದರಿಂದ ಮಾತೃ ಭಾಷಾ ಅಲ್ಲದ ವಿದ್ಯಾರ್ಥಿಗಳು ಮೇಲೆ ತಿಳಿಸಿದ ಭಾಷೆಗಳನ್ನು ಕಲಿಯುವ ಮಟ್ಟ ಇನ್ನೂ ಸಾಕಷ್ಟು ಪ್ರಗತಿ ಸಾಧಿಸದಿರುವ ಕಾರಣ 15 ಅಂಕಗಳ ಕೃಪಾಂಕ ನೀಡುವ ಪದ್ಧತಿಯನ್ನು 2004-05ನೇ ಶೈಕ್ಷಣಿಕ ವರ್ಷದಿಂದ ಮುಂದಿನ 10 ವರ್ಷಗಳ ಕಾಲಕ್ಕೆ ಮುಂದುವರೆಸುವಂತೆ ಕೋರುತ್ತೇನೆ".

4. ನಿರ್ದೇಶಕರು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಅವರು ತಮ್ಮ ಈ ಪ್ರಸ್ತಾವನೆಗೆ ಸಂಬಂಧಿಸಿದಂತೆ ಕಳೆದ 5 ವರ್ಷಗಳ ಎಸ್.ಎಸ್.ಎಲ್.ಸಿ. ಶೇಕಡಾವಾರು ವಿವರ ನೀಡುತ್ತ, ಅದರನ್ವಯ ಭಾಷೆ 2 ಮತ್ತು 3, ಈ ಭಾಷೆಗಳು ಇನ್ನು ಮುಂದೆಯೂ ಕೃಪಾಂಕಗಳಿಗೆ ಒಳಗಾಗುವ ಅವಶ್ಯಕತೆ ಇರುವುದಾಗಿ ಅಭಿಪ್ರಾಯಿಸಿರುತ್ತಾರೆ. ಆದುದರಿಂದ ಸರ್ಕಾರದ ಆದೇಶಗಳನ್ವಯ ಎಸ್.ಎಸ್.ಎಲ್.ಸಿ. ಹಂತದಲ್ಲಿ ಕೃಪಾಂಕವನ್ನು ಇನ್ನು 5 ವರ್ಷಗಳವರೆಗೆ ಮುಂದುವರೆಸುವುದು ಸೂಕ್ತವೆಂದು ಅಭಿಪ್ರಾಯಿಸಿ ಕ್ರಮ ಸಂಖ್ಯೆ (4) ರಲ್ಲಿ ಉಲ್ಲೇಖಿಸಿದ ದಿನಾಂಕ: 13.12.2004ರ ಪತ್ರದನ್ವಯ ಈ ಬಗೆಗೆ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

5. ಮೇಲೆ (2) ರಲ್ಲಿ ಓದಲಾದ ದಿನಾಂಕ: 29.08.1996ರ ಆದೇಶದನ್ವಯ ಸದರಿ ಕೃಪಾಂಕ ನೀಡಲು ಯಾವುದೇ ಕಾಲಮಿತಿ ಇಲ್ಲದೇ ಶಾಶ್ವತವಾಗಿ ಅದನ್ನು ನೀಡಲು ಆಸ್ಪದ ಇದ್ದು, ಅದಕ್ಕೆ ನಿರ್ದೇಶಕರು ಪ್ರಸ್ತಾಪಿಸಿದಂತೆ ಕಾಲಮಿತಿ ನಿಗದಿಪಡಿಸಲು ಸಮರ್ಥನೆ ನೀಡಲು ನಿರ್ದೇಶಕರಿಗೆ, ಮೇಲೆ (5)ರಲ್ಲಿ ಓದಲಾದ ದಿನಾಂಕ: 19.02.2005ರ ಸರ್ಕಾರದ ಪತ್ರದನ್ವಯ ಕೋರಿದಾಗ, ನಿರ್ದೇಶಕರು ಮೇಲೆ (6) ರಲ್ಲಿ ಓದಲಾದ ಅವರ ದಿನಾಂಕ: 03.03.2005ರ ಪತ್ರದನ್ವಯ ಈ ಕೆಳಗೆ ಉದ್ಧರಿಸಿದಂತೆ ಸಮರ್ಥನೆ ನೀಡಿರುತ್ತಾರೆ.

> "ಪ್ರಸ್ತುತ ಜಾರಿಯಲ್ಲಿರುವ ದಿನಾಂಕ: 29.08.1996ರ ಸರ್ಕಾರಿ ಆದೇಶ ಸಂಖ್ಯೆ ಇಡಿ 32 ಪಿಜಿಸಿ 96ರ ಆದೇಶದಲ್ಲಿ ಕೃಪಾಂಕ ನೀಡುವ ಬಗ್ಗೆ ಯಾವುದೇ ಕಾಲಮಿತಿ ಇಲ್ಲ ಹಾಗೂ ಅದೊಂದು ಶಾಶ್ವತ ಉಪಬಂಧ ಎಂದು ಪರಿಗಣಿಸಿದ್ದರೂ ಮುಂದೆ ಇಂಥಹ ವಿನಾಯ್ತಿಗಳು ಅನಿರ್ದಿಷ್ಟ ಕಾಲ ಮುಂದುವರೆಯುವುದು ಸರಿ ಅಲ್ಲ. 5 ವರ್ಷಗಳ ನಂತರ ಮತ್ತೆ ಪುನರ್ ಪರಿಶೀಲನೆ ಮಾಡುವುದು. ಅವಶ್ಯಕ. ಇಲ್ಲವಾದಲ್ಲಿ ಪಠ್ಯಕ್ರಮ ಪ್ರಕಾರ ಒಂದು ನಿಯಮ, ಎಸ್.ಎಸ್.ಎಲ್.ಸಿ. ಪರೀಕ್ಷೆಗಾಗಿ ಇನ್ನೊಂದು ನಿಯಮ ಎಂದು ಖಾಯಂ ಆಗಿ ಉಳಿದುಬಿಡುತ್ತದೆ."

6. ಈ ರೀತಿ, ನಿರ್ದೇಶಕರು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಇವರು ಪ್ರಸ್ತಾಪಿಸಿದ್ದನ್ನು ಸರ್ಕಾರ ಕೂಲಂಕಷವಾಗಿ ಪರಿಶೀಲಿಸಿ ಹಾಗೂ ಸಂಬಂಧಿಸಿದ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಹಾಜರಾಗುವ ಅಭ್ಯರ್ಥಿಗಳಿಗೆ ಭಾಷೆ 2 ಮತ್ತು 3ಕ್ಕೆ ಸಂಬಂಧಿಸಿದಂತೆ ಕೃಪಾಂಕ ನೀಡುವ ಸೌಲಭ್ಯವನ್ನು ಇನ್ನೂ 5 ವರ್ಷಗಳ ಕಾಲ ಮುಂದುವರೆಸುವುದು ಅಗತ್ಯವೆಂದು ಸರ್ಕಾರ ಮನಗಂಡು ಈ ಕೆಳಕಂಡಂತೆ ಈ ಮೂಲಕ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 216 ಪಿಜಿಸಿ 2004 ಬೆಂಗಳೂರು, ದಿನಾಂಕ: 7ನೇ ಏಪ್ರಿಲ್ 2005**

7. ಮೇಲೆ (2)ರಲ್ಲಿ ಓದಲಾದ ದಿನಾಂಕ: 29.08.1996ರ ಆದೇಶವನ್ನು ಮಾರ್ಪಡಿಸಿ ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಸಂಬಂಧಿಸಿದಂತೆ ಕನ್ನಡ ಮಾತೃಭಾಷೆಯಲ್ಲದ ವಿದ್ಯಾರ್ಥಿಗಳಿಗೆ ಕನ್ನಡ ಭಾಷಾ ಪರೀಕ್ಷೆಯಲ್ಲಿ ಮತ್ತು ಹಿಂದಿ ಮಾತೃ ಭಾಷೆಯಲ್ಲದ ವಿದ್ಯಾರ್ಥಿಗಳಿಗೆ ಹಿಂದಿ ಭಾಷೆ ಪರೀಕ್ಷೆಯಲ್ಲಿ, ಹಾಗೆಯೇ ಇಂಗ್ಲೀಷ್ ಮಾತೃ ಭಾಷೆಯಲ್ಲದ ವಿದ್ಯಾರ್ಥಿಗಳಿಗೆ ಇಂಗ್ಲೀಷ್ ಭಾಷೆಯಲ್ಲಿ ತೇರ್ಗಡೆಯಾಗಲು ಅನುಕೂಲವಾಗುವಂತೆ ಗರಿಷ್ಠ 15 ಕೃಪಾಂಕಗಳನ್ನು ನೀಡತಕ್ಕದ್ದು ಎಂದು ಇರುವ ಸೌಲಭ್ಯವನ್ನು 2004-05ನೇ ಶೈಕ್ಷಣಿಕ ಸಾಲು ಒಳಗೊಂಡಂತೆ 5 ವರ್ಷಗಳವರೆಗೆ ಅಂದರೆ 2008-09ನೇ ಶೈಕ್ಷಣಿಕ ಸಾಲಿನವರೆಗೆ ಈ ಮೂಲಕ ವಿಸ್ತರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.520

**ಬಿ. ಹೆಚ್. ಪಡಸಲಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಗದಗ್ ಕಚೇರಿಯ ಕಟ್ಟಡದ ಬಾಡಿಗೆಯನ್ನು ಪಾವತಿಸಲು ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ ಆದೇಶ.

**ಓದಲಾಗಿದೆ :** 1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗದಗ್ ಇವರ ಪತ್ರ ಸಂ. ಜಿಪಂಗ:ಸಿಬ್ಬಂದಿ: ವಿನಿ2: ವಿ-38:04-05: 3865, ದಿನಾಂಕ: 14.3.2005.

**ಪ್ರಸ್ತಾವನೆ:**

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗದಗ್ ಇವರು, ಮೇಲೆ ಓದಲಾದ ದಿನಾಂಕ: 14.3.2005ರ ಪತ್ರದಲ್ಲಿ, ಗದಗ್ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗವು ಹಾಲಿ ಕೆಲಸ ನಿರ್ವಹಿಸುತ್ತಿರುವ ಕಟ್ಟಡದಲ್ಲಿ ಸ್ಥಳದ ಅಭಾವ ಹಾಗೂ ವಾಹನಗಳ ಶಬ್ದದಿಂದಾಗಿ ಮತ್ತು ಜನನಿಬಿಡ ಪ್ರದೇಶದಲ್ಲಿರುವುದರಿಂದಾಗಿ ಸದರಿ ಕಚೇರಿಯನ್ನು ಕರ್ನಾಟಕ ಗೃಹ ಮಂಡಳಿಯ ಸಂಕೀರ್ಣದಲ್ಲಿರುವ ಒಟ್ಟು 2800 ಚದರಡಿ ಕಾರ್ಯಾಲಯಕ್ಕಾಗಿ ಹಾಗೂ 900 ಚದರಡಿ ಪಾರ್ಕಿಂಗ್‌ಗಾಗಿ ಸ್ಥಳಾವಕಾಶವನ್ನು ಜಿಲ್ಲಾ ಪಂಚಾಯತ್‌ನ ಒಪ್ಪಿಗೆ ಮೇರೆಗೆ ಲೋಕೋಪಯೋಗಿ ಇಲಾಖೆಯು ನಿರ್ಧರಿಸಿರುವ ಮಾಸಿಕ ಬಾಡಿಗೆ ರೂ.15,000-00 ಗಳಿಗೆ ಬಾಡಿಗೆಗೆ ಪಡೆಯಲು ಸರ್ಕಾರದ ಆಡಳಿತಾತ್ಮಕ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 68 ಜಿಪಅ 05 ಬೆಂಗಳೂರು, ದಿನಾಂಕ: 1ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗದಗ್ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗದ ಕಚೇರಿಗಾಗಿ ಕರ್ನಾಟಕ ಗೃಹ ಮಂಡಳಿಯ ಸಂಕೀರ್ಣದಲ್ಲಿ ಒಟ್ಟು 2800 ಚದರಡಿ ಕಾರ್ಯಾಲಯಕ್ಕಾಗಿ ಹಾಗೂ 900 ಚದರಡಿ ಪಾರ್ಕಿಂಗ್‌ಗಾಗಿ ಸ್ಥಳಾವಕಾಶದ ಕಟ್ಟಡವನ್ನು ರೂ. 15,000-00 ಗಳಿಗೆ ಮಾಸಿಕ ಬಾಡಿಗೆಗೆ ಪಡೆಯಲು ಸರ್ಕಾರವು ಈ ಮೂಲಕ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಆದೇಶ ಸಂ. ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.96ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.521

**ಎಸ್. ಸಿ. ಸುಂದರ**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

**ವಿಷಯ :** ಶ್ರೀ ಎ. ವೆಂಕಟೇಶ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಯಾಂತ್ರಿಕ ಉಪ ವಿಭಾಗ, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಮಂಗಳೂರು ಇವರ ಅಮಾನತ್ತನ್ನು ತೆರವುಗೊಳಿಸುವ ಬಗ್ಗೆ-ಆದೇಶ.

**ಓದಲಾಗಿದೆ :**
1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ದಕ್ಷಿಣ ಕನ್ನಡ, ಮಂಗಳೂರು ಇವರ ಪತ್ರ ಸಂಖ್ಯೆ: ದಕ: ಜಿಪಂ: ಆಡಳಿತ:(ಇಂ): ಸಿಆರ್:04-05, ದಿನಾಂಕ: 04.08.04.
2. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ: 36: ಇಎನ್‌ಕ್ಯೂ:04: ದಿನಾಂಕ: 31.12.04.
3. ಶ್ರೀ ಎ. ವೆಂಕಟೇಶ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರ ಮನವಿ ದಿನಾಂಕ: 17.02.05.
4. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ದಕ್ಷಿಣ ಕನ್ನಡ, ಮಂಗಳೂರು ಇವರ ಪತ್ರ ಸಂಖ್ಯೆ: ದಕ: ಜಿಪಂ: ಆಡಳಿತ: (ಇಂ): ಸಿಆರ್: 172/36304-05, ದಿನಾಂಕ: 23.2.05 ಮತ್ತು 25.02.05.

**ಪ್ರಸ್ತಾವನೆ:**

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಪಂ, ದಕ್ಷಿಣ ಕನ್ನಡ, ಮಂಗಳೂರು ಇವರು ಮೇಲೆ ಓದಲಾದ ಕ್ರಮ ಸಂ.(1)ರ ದಿನಾಂಕ: 4.08.04ರ ವರದಿಯಲ್ಲಿ ತಮ್ಮ ಬಂಟ್ವಾಳ ಮತ್ತು ಉಲ್ಲಾಳ ಕ್ಷೇತ್ರದ ಬೋಳಿಯಾರ್ ಗ್ರಾಮದ ದೇವರಗುಂಡಿ ಎಂಬಲ್ಲಿ 2002-03 ರಲ್ಲಿ ಪ್ರಕೃತಿ ವಿಕೋಪ ನಿಧಿಯಿಂದ ನಿರ್ಮಿಸಿರುವ ತಡೆಗೋಡೆಯು ಕಳಪೆ ಕಾಮಗಾರಿಯಿಂದಾಗಿ ಬಿದ್ದು ಹೋಗಿದ್ದು, ಈ ರೀತಿ ಗೋಡೆ ಬೀಳಲು ಶ್ರೀ ಎ. ವೆಂಕಟೇಶ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಯಾಂತ್ರಿಕ ಉಪ ವಿಭಾಗ, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಮಂಗಳೂರು ಇವರ ಅಸಮರ್ಪಕ ಕಾರ್ಯನಿರ್ವಹಣೆ ಮತ್ತು ಅವ್ಯವಹಾರವೇ ಕಾರಣವೆಂದು ಮೇಲ್ನೋಟಕ್ಕೆ ಕಂಡುಬಂದಿದ್ದು, ಇವರು ಕಾಮಗಾರಿಗಳ ಗುಣಮಟ್ಟದ ಬಗ್ಗೆ ಲಕ್ಷ್ಯ ವಹಿಸದೆ ಸರ್ಕಾರಿ ಕಾಮಗಾರಿಗಳನ್ನು ಸೂಕ್ತ ರೀತಿಯಲ್ಲಿ ನಿರ್ವಹಿಸುತ್ತಿಲ್ಲವೆಂದು ಇದರಿಂದಾಗಿ ಇವರು ತೀವ್ರ ಕರ್ತವ್ಯ ಲೋಪವೆಸಗಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟುಮಾಡಿರುತ್ತಾರೆಂದೂ, ಇವರ ಅಧಿಕಾರದ ಅವಧಿಯಲ್ಲಿ ನಿರ್ವಹಿಸಿರುವ ಹೆಚ್ಚಿನ ಎಲ್ಲಾ ಕಾಮಗಾರಿಗಳ ಬಗ್ಗೆ ಗುರುತರ ದೂರುಗಳಿದ್ದು ಇವರನ್ನು ಮುಂದಿನ ವಿಚಾರಣೆಗೆ ಒಳಪಡಿಸಿ ಸೇವೆಯಿಂದ ಅಮಾನತ್ತಿನಲ್ಲಿಡುವುದು ಸೂಕ್ತವೆಂದು ವರದಿ ಮಾಡಿದ್ದರ ಮೇರೆಗೆ ಸರ್ಕಾರವು ಮೇಲೆ ಓದಲಾದ ಕ್ರಮ ಸಂ.(2)ರ ಆದೇಶದಲ್ಲಿ ಸದರಿ ಅಧಿಕಾರಿಯವರ ಮೇಲಿನ ಇಲಾಖಾ ವಿಚಾರಣೆ ಬಾಕಿ ಇಟ್ಟು ಅಮಾನತ್ತಿನಲ್ಲಿರಿಸಲಾಗಿತ್ತು.

ಶ್ರೀ ಎ. ವೆಂಕಟೇಶ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಇವರು ಮೇಲೆ ಓದಲಾದ ಕ್ರಮ ಸಂ.(3)ರ ಪ್ರಕಾರ ಸರ್ಕಾರಕ್ಕೆ ಮನವಿ ಸಲ್ಲಿಸಿ, ಸದರಿ ಆಪಾದನೆಯಲ್ಲಿ ಒಳಗೊಂಡ ತಡೆಗೋಡೆಯನ್ನು ಹಿಂದೆ ಮಂಗಳೂರು ತಾಂತ್ರಿಕ ಉಪ ವಿಭಾಗದಿಂದ ನಿರ್ವಹಿಸಿದ್ದು, ಮತ್ತು ಜಿಲ್ಲಾಧಿಕಾರಿಗಳಿಂದ ಆಡಳಿತಾತ್ಮಕ ಮಂಜೂರಾತಿ ಪಡೆದು ಸದರಿ ಕಾಮಗಾರಿಯನ್ನು ದಿನಾಂಕ: 6.5.02 ರಂದೇ ಪೂರ್ಣಗೊಳಿಸಲಾಗಿರುವುದರಿಂದ ಸದರಿ ಕಾಮಗಾರಿ ಮುಗಿದಿರುವ ದಿನಾಂಕಕ್ಕೂ ಹಾಗೂ ಅವರು ಕಾರ್ಯ ವರದಿ ಮಾಡಿಕೊಂಡಿರುವ ದಿನಾಂಕಕ್ಕೂ ಮೂರು ತಿಂಗಳ ಅಂತರವಿದ್ದು, ಸದರಿ ಕೆಲಸಕ್ಕೂ ತಮಗೂ ಯಾವುದೇ ಸಂಬಂಧವಿಲ್ಲದಿರುವುದರಿಂದ ತಮ್ಮನ್ನು ಅಮಾನತ್ತುಗೊಳಿಸಿರುವುದನ್ನು ಪುನರ್ ಪರಿಶೀಲಿಸುವಂತೆ ಮನವಿ ಮೂಲಕ ಕೋರಿದ್ದರು. ಇವರ ಮನವಿಯನ್ನು ದಕ್ಷಿಣ ಕನ್ನಡ, ಜಿಲ್ಲಾ ಪಂಚಾಯತ್‌ನ ಹಿಂದಿನ ಹಾಗೂ ಹಾಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರುಗಳಿಗೆ ಕಳುಹಿಸಿ, ಸವಿವರವಾದ ವರದಿ ಸಲ್ಲಿಸುವಂತೆ ಕೋರಲಾಗಿತ್ತು.

ಈ ಮಧ್ಯೆ, ತಮ್ಮ ಅಮಾನತ್ತಿನ ಬಗ್ಗೆ ಇವರು ಕೆ.ಎ.ಟಿ.ನಲ್ಲಿ ಸಲ್ಲಿಸಿದ್ದ ಅರ್ಜಿ ಸಂಖ್ಯೆ: 185/05ಕ್ಕೆ ಸಂಬಂಧಪಟ್ಟಂತೆ ಕೆ.ಎ.ಟಿ.ಯು ದಿನಾಂಕ: 6.1.05 ರಲ್ಲಿ ತೀರ್ಪು ನೀಡಿದ್ದು, ಸದರಿ ತೀರ್ಪಿನ ಪ್ರಮುಖ ಭಾಗ ಈ ಕೆಳಕಂಡಂತಿದೆ.

Accordingly the applicant is permitted to seek review of the impugned order before the first respondent, in view of the various grounds raised in the present application. If the applicant approaches the first respondent for review of the impugned order, the first respondent is directed to consider the same and pass appropriate orders in accordance with law. Within a period of one month. The first respondent is also directed to consider transfer of the applicant to some other office within Mangalore District during the said period.

Accordingly, the application stands disposed of.,

ಶ್ರೀ ಎ. ವೆಂಕಟೇಶ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಇವರ ಮನವಿಯಲ್ಲಿನ ಅಂಶಗಳ ಬಗ್ಗೆ ದಕ್ಷಿಣ ಕನ್ನಡ ಜಿಪಂನ ಹಿಂದಿನ ಮತ್ತು ಹಾಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ವರದಿ ಸಲ್ಲಿಸಿದ್ದು, ಆ ವರದಿಯ ಪ್ರಕಾರ ಸದರಿ ಕಾಮಗಾರಿಗೆ ಸಂಬಂಧಿಸಿದ ದೂರಿನ ಬಗ್ಗೆ ಮಂಗಳೂರು ನೋಡೆಲ್ ಅಧಿಕಾರಿ ಹಾಗೂ ಜಂಟಿ ಕೃಷಿ ನಿರ್ದೇಶಕರು, ಮಂಗಳೂರು ಇವರು ಸ್ಥಳ ಪರಿಶೀಲನೆ ನಡೆಸಿ, ವರದಿ ಸಲ್ಲಿಸಿದ್ದು, ಸದರಿ ವರದಿಯಲ್ಲಿ ಈ ಕಾಮಗಾರಿಯು 2002ನೇ ಏಪ್ರಿಲ್ ತಿಂಗಳಲ್ಲಿ ಪ್ರಕೃತಿ ವಿಕೋಪ ಪರಿಹಾರ ಯೋಜನೆಯಡಿ ಕೈಗೊಳ್ಳಲಾಗಿದ್ದು, ಮಂಗಳೂರು ತಾಲ್ಲೂಕು ಬೋಳಿಯಾರ್ ಗ್ರಾಮದ ದೇವರಗುಂಡಿ ಎಂಬಲ್ಲಿ ಪ್ರಾಕೃತಿಕ ವಿಕೋಪ ನಿಧಿಯಿಂದ ನಿರ್ಮಿಸಿದ ತಡೆ ಗೋಡೆ ಕಾಮಗಾರಿಯು ಪ್ರಕೃತಿ ವಿಕೋಪ ನಿಧಿಯಡಿ ದ.ಕ. ಜಿಲ್ಲಾಧಿಕಾರಿಗಳಿಂದ ದಿನಾಂಕ: 25.1.02 ರಂದು ಆಡಳಿತಾತ್ಮಕ ಮಂಜೂರಾತಿ ಪಡೆದ ಕಾಮಗಾರಿಯಾಗಿದ್ದು, ಕಾಮಗಾರಿಯನ್ನು ದಿನಾಂಕ: 7.4.02 ರಂದು ಪ್ರಾರಂಭಿಸಿ, ದಿನಾಂಕ: 6.05.02 ಕ್ಕೆ ಕಾಮಗಾರಿಯನ್ನು ಮುಕ್ತಾಯ ಮಾಡಲಾಗಿರುತ್ತದೆ. ಅಲ್ಲದೆ, ದೂರಿನ ಅರ್ಜಿದಾರರು ಅಪೂರ್ಣ ವಿಳಾಸ ನೀಡಿ ಅರ್ಜಿ ಬರೆದಿದ್ದು, ಅರ್ಜಿಯಲ್ಲಿ ಯಾವುದೇ ಸತ್ಯಾಂಶವಿರುವುದಿಲ್ಲ. ಹಾಗೂ ದುರುದ್ದೇಶದಿಂದ ಬರೆದಿರುವಂತೆ ಭಾಸವಾಗುತ್ತದೆ. ತಡೆಗೋಡೆಯ ಮಧ್ಯದಲ್ಲಿ ಮೇಲ್ಭಾಗವು ಮಳೆಗಾಲದಲ್ಲಿ ಯಾವುದೋ ಬಾಹ್ಯ ಒತ್ತಡಕ್ಕೆ ಒಳಗಾಗಿ ಬಿದ್ದಿರುವ ಸಾಧ್ಯತೆ ಇದೆ. ಹಾಗೂ ಬಿದ್ದಿರುವ ಭಾಗದಿಂದ ಸರ್ಕಾರಕ್ಕೆ ಯಾವುದೇ ನಷ್ಟವಾಗದಂತೆ ಸರಿಪಡಿಸಲಾಗಿದೆ ಎಂದು ಸ್ಥಳ ಪರಿಶೀಲನೆ ನಡೆಸಿದ ನಂತರ ವರದಿ ನೀಡಿರುತ್ತಾರೆಂದು ಹಾಗೂ ದ.ಕ. ಜಿಪಂಇಂ ವಿಭಾಗದ ಕಾರ್ಯಪಾಲಕ ಇಂಜಿನಿಯರ್‌ರವರ ವರದಿಯ ಪ್ರಕಾರ ಈ ಕಾಮಗಾರಿಯಲ್ಲಿ ಯಾವುದೇ ಅವ್ಯವಹಾರ ನಡೆದಿರುವುದಿಲ್ಲವೆಂದು ಮೇಲೆ ಓದಲಾದ ಕ್ರಮ ಸಂ. (4)ರ ಪ್ರಕಾರ ದಕ್ಷಿಣ ಕನ್ನಡ ಜಿಪಂ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರು ವರದಿ ಮಾಡಿರುತ್ತಾರೆ. ಆರೋಪಿತ ಅಧಿಕಾರಿಯವರು ಮನವಿ ಸಲ್ಲಿಸಿ ತಮ್ಮ ಮೇಲಿನ ಅಮಾನತ್ತನ್ನು ತೆರವುಗೊಳಿಸಿ ತಮ್ಮ ಸೇವೆಯನ್ನು ಮಾತ್ರ ಇಲಾಖೆಯಾದ ಲೋಕೋಪಯೋಗಿ ಇಲಾಖೆಗೆ ಹಿಂದಿರುಗಿಸುವಂತೆ ಕೋರಿರುತ್ತಾರೆ.

ಸರ್ಕಾರವು ಈ ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ ಗ್ರಾಅಪ 36 ಇಎನ್‌ಕ್ಯೂ 04 ಬೆಂಗಳೂರು, ದಿನಾಂಕ: 29ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ, ಮತ್ತು ಮೇಲ್ಮನವಿ) 1957 ರ ನಿಯಮ-10ನೇ ನಿಯಮದ (5)ನೇ ಉಪ ನಿಯಮ (ಸಿ) ಪ್ರಕಾರ ಶ್ರೀ ಎ. ವೆಂಕಟೇಶ್, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಯಾಂತ್ರಿಕ ಉಪ ವಿಭಾಗ, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಮಂಗಳೂರು ಇವರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ತೆರವುಗೊಳಿಸಿ, ಸೇವೆಯಲ್ಲಿ ಪುನರ್ ಸ್ಥಾಪಿಸಿದೆ.

ಮುಂದಿನ ಸ್ಥಳ ನಿಯುಕ್ತಿಗಾಗಿ ಇವರ ಸೇವೆಯನ್ನು ಅವರ ಮಾತೃ ಇಲಾಖೆಯಾದ ಲೋಕೋಪಯೋಗಿ ಇಲಾಖೆಗೆ ಹಿಂದಿರುಗಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.522

**ಎಸ್. ಸಿ. ಸುಂದರ**
ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್. ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ :** ಬಳ್ಳಾರಿ ಮ್ಯಾನ್ಯೂಯಲ್ ಪ್ರಕಟಣೆಯ ಮಾರಾಟ ಬೆಲೆ ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆಯವರ ಪತ್ರ ಸಂಖ್ಯೆ: ಕ.ಗ್ಯಾ.ಇ.ಸಿ. (2) ಬಿ.ಮ್ಯಾ. ಪ್ರಕಟಣೆ 2004-05, ದಿನಾಂಕ: 19.02.2005.

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖಿತ ಪತ್ರದಲ್ಲಿ ಬಳ್ಳಾರಿ ಮ್ಯಾನ್ಯೂಯಲ್ ಮುದ್ರಣ ಪೂರ್ಣಗೊಂಡಿದ್ದು, ಪುಸ್ತಕಗಳು ದಾಸ್ತಾನಿಗೆ ಬಂದಿರುತ್ತದೆ. ಸದರಿ ಪ್ರಕಟಣೆಯ 500 (ಐದು ನೂರು ಮಾತ್ರ) ಪ್ರತಿಗಳನ್ನು ಮುದ್ರಣ ಮಾಡಿದೆ. ಇದಕ್ಕೆ ತಗುಲಿದ ಒಟ್ಟು ವೆಚ್ಚ ರೂ.76,004/- ಆಗಿದೆ. (ಇದರಲ್ಲಿ ಪೇಪರ್ ಖರೀದಿ ವೆಚ್ಚ, ಮುದ್ರಣ ವೆಚ್ಚ ಸೇರಿದೆ) ಹೀಗಾಗಿ ಬಿಡಿ ಪ್ರತಿಯ ಮಾರಾಟ ಬೆಲೆಯನ್ನು ರೂ. 152/- ಕ್ಕೆ ನಿಗದಿಗೊಳಿಸಲು ಕೋರಿರುತ್ತಾರೆ.

ಮುಖ್ಯ ಸಂಪಾದಕರು ಗ್ಯಾಸೆಟಿಯರ್ ಇಲಾಖೆಯ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂಕಇ 5 ಕರಾಗೆ 2005, ಬೆಂಗಳೂರು ದಿನಾಂಕ: 31ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಬಿಡಿ ಪುಸ್ತಕದ ಮಾರಾಟ ಬೆಲೆಯನ್ನು ರೂ. 160/-ಕ್ಕೆ (ಒಂದು ನೂರು ಅರವತ್ತು ರೂಪಾಯಿಗಳು ಮಾತ್ರ) ನಿಗದಿಗೊಳಿಸಲು ಆದೇಶಿಸಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು ಶಿಕ್ಷಣ ಇಲಾಖೆ ಇವರ ಟಿಪ್ಪಣಿ ಸಂಖ್ಯೆ: ಶಿ.ಇ. 297 ಐ.ಎಫ್. (ಬಿ.ಎ) 2005 ದಿನಾಂಕ: 23.3.2005 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹಾಗೂ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.196ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.523

**ಎಸ್. ವಿಶಾಲಾಕ್ಷಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಸಣ್ಣಶೆಟ್ಟಿ ಪಿಸಿ, ಇವರ ಪರಿಷ್ಕರಣಾ ಅರ್ಜಿ ಬಗ್ಗೆ

**ಓದಲಾಗಿದೆ :**
1. ಶಿಸ್ತು ಪ್ರಾಧಿಕಾರಿ ಹಾಗೂ ಡಿಸಿಪಿ, ಪೂರ್ವ ವಿಭಾಗ, ಬೆಂಗಳೂರು ನಗರ ಇವರ ಆದೇಶ ಸಂ. ಡಿಇ: ಆರ್ 6-7: ಪೊ-02 ದಿನಾಂಕ: 05.05.2003.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಆಯುಕ್ತರು (ಆಡಳಿತ ಮತ್ತು ಸಿಎಆರ್) ಬೆಂಗಳೂರು ಇವರ ಆದೇಶ ಸಂ: 25: ಅಪೀಲು: 2003 ದಿನಾಂಕ: 19.08.2003.
3. ಅರ್ಜಿದಾರರ ಪರಿಷ್ಕರಣಾ ಮೇಲ್ಮನವಿ ಅರ್ಜಿ ದಿನಾಂಕ: 07.04.2004.
4. ಡಿಜಿ ಮತ್ತು ಐಜಿಪಿಯವರ ಪತ್ರ ಸಂ: ಅಪೀಲು:2:28:2004 ಬೆಂಗಳೂರು, ದಿನಾಂಕ: 19.08.2004.
5. ಕರ್ನಾಟಕ ಲೋಕಸೇವಾ ಆಯೋಗದ ಪರಿಷ್ಕರಣಾ ಸಂ. ಡಿಎಸ್‌ಸಿ 139:ಸಿಎನ್‌ಎಸ್:2004 ದಿನಾಂಕ: 05.02.05.

**ಪ್ರಸ್ತಾವನೆ:**

ಶ್ರೀ ಸಣ್ಣ ಶೆಟ್ಟಿ, ಪಿಸಿ 6286, ಮಹದೇವಪುರ ಪೊಲೀಸ್ ಠಾಣೆ (ಹಾಲಿ ರಾಮಮೂರ್ತಿನಗರ ಪೊಲೀಸ್ ಠಾಣೆ) ಇವರ ವಿರುದ್ಧ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 06 ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪ:**

"ಶ್ರೀ ಸಣ್ಣಶೆಟ್ಟಿ, ಪಿ.ಸಿ. 6286, ಮಹದೇವಪುರ ಪೊಲೀಸ್ ಠಾಣೆ ಆದ ನೀವು ದಿನಾಂಕ: 09.10.2002 ರಂದು ರಾತ್ರಿ ಪಹರೆ ಕರ್ತವ್ಯದಲ್ಲಿದ್ದು, ರಾತ್ರಿ ಕರ್ತವ್ಯಕ್ಕೆ ಬಂದ ಪಿಸಿ 6291 ಶ್ರೀ ಷಡಕ್ಷರಯ್ಯ ಎಂಬುವವರ ಜೊತೆ ಏಕಾ ಏಕಿ ಜಗಳ ತೆಗೆದು ಅವಾಚ್ಯ ಶಬ್ದಗಳಿಂದ ಅವರನ್ನು ಬೈಯುತ್ತಿದ್ದಾಗ ಹೆಚ್‌ಸಿ. 1268, ಶ್ರೀ ಕೃಷ್ಣಯ್ಯ ರವರು ಮಧ್ಯ ಪ್ರವೇಶಿಸಿ ಈ ರೀತಿ ಸಿಬ್ಬಂದಿಗೆ ಬೈಯುವುದು ಸರಿಯಲ್ಲ ಎಂದು ನಿಮಗೆ ಹೇಳಿದಾಗ ನೀವು ಹೆಚ್‌ಸಿ 1268, ಕೃಷ್ಣಯ್ಯ ರವರಿಗೆ ಅವಾಚ್ಯ ಶಬ್ದಗಳಿಂದ ಬೈದು ಕುತ್ತಿಗೆ ಹಿಡಿದು ಕೆಳಕ್ಕೆ ತಳ್ಳಿ ಕೈಗಳಿಂದ ಹೊಡೆದು ಅಶಿಸ್ತು ಮತ್ತು ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ."

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣಾಧಿಕಾರಿಗಳು ಸಲ್ಲಿಸಿದ ವರದಿಯ ಹಿನ್ನೆಲೆಯಲ್ಲಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಪೂರ್ವ ವಿಭಾಗ ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 05.05.2003 ರ ಆದೇಶದಲ್ಲಿ ಅರ್ಜಿದಾರರ ಮೂರು ವಾರ್ಷಿಕ ವೇತನ ಬಡ್ತಿಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗುವಂತೆ ತಡೆಹಿಡಿಯುವ ದಂಡನೆ ವಿಧಿಸಿರುತ್ತಾರೆ. ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿ ಅರ್ಜಿಯಲ್ಲಿ ಯಾವುದೇ ಸತ್ಯಾಂಶವಿಲ್ಲವೆಂದು ಮನಗಂಡು ಶಿಸ್ತು ಪ್ರಾಧಿಕಾರಿಯ ಆದೇಶದಲ್ಲಿ ಹಸ್ತ ಕ್ಷೇಪ ಮಾಡದೇ, ಅರ್ಜಿದಾರರು ಸಲ್ಲಿಸಿದ ಮೇಲ್ಮನವಿ ಅರ್ಜಿಯನ್ನು ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಆಯುಕ್ತರು ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ: 19.08.2003ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಇಲಾಖಾ ವಿಚಾರಣೆ ದಾಖಲೆ ಕಂಡಿಕಾವಾರು ಷರಾ ಹಾಗೂ ಅರ್ಜಿದಾರರ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಪರಿಶೀಲಿಸಿದ ನಂತರ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಮೂರು ವಾರ್ಷಿಕ ವೇತನ ಬಡ್ತಿಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗುವಂತೆ ಹಿಡಿಯುವ ಆದೇಶವನ್ನು ಮಾರ್ಪಡಿಸಿ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ ತಡೆಹಿಡಿಯುವ ದಂಡನೆ ವಿಧಿಸಲು ಸರ್ಕಾರ ನಿರ್ಧರಿಸಿ ಕರ್ನಾಟಕ ಲೋಕ ಸೇವಾ ಆಯೋಗದ ಅನುಮೋದನೆ ಪಡೆಯಲಾಯಿತು.

ಕರ್ನಾಟಕ ಲೋಕ ಸೇವಾ ಆಯೋಗವು ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ದಿನಾಂಕ: 05.02.2005ರ ಪತ್ರದಲ್ಲಿ ಪ್ರಕರಣವನ್ನು ಪರಿಶೀಲಿಸಿ, ಶಿಸ್ತನ್ನು ಜಾರಿಗೆ ತಂದು ಬೇರೆಯವರಿಗೆ ಮಾದರಿ ಆಗಬೇಕಾದವರೆ ಅಶಿಸ್ತು ನಡವಳಿಯನ್ನು ಪ್ರದರ್ಶಿಸಿದ್ದು, ಈ ಕೃತ್ಯ ಎಸಗಿದ ಆರೋಪಿತ ನೌಕರರಿಗೆ ಈಗ ಪ್ರಸ್ತಾಪಿಸಿದ ದಂಡನೆಯು ಕಡಿಮೆಯೆಂದು ಅಭಿಪ್ರಾಯಪಟ್ಟು ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗುವಂತೆ ತಡೆಹಿಡಿಯುವ ಶಿಕ್ಷೆ ವಿಧಿಸುವುದು ಸೂಕ್ತವೆಂದು ತಿಳಿಸಿದೆ. ಸರ್ಕಾರವು ಆಯೋಗದ ಶಿಫಾರಸ್ಸಿನ ಅನ್ವಯ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 79 ಪೊಸಿಅ 2004, ಬೆಂಗಳೂರು, ದಿನಾಂಕ: 15ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಣ್ಣಶೆಟ್ಟಿ ಪಿಸಿ 6286, ಮಹದೇವಪುರ ಪೊಲೀಸ್ ಠಾಣೆ ಬೆಂಗಳೂರು ಇವರಿಗೆ ಶಿಸ್ತು ಪ್ರಾಧಿಕಾರಿ ತನ್ನ ದಿನಾಂಕ: 5.05.2003 ರ ಆದೇಶದಲ್ಲಿ ವಿಧಿಸಿದ ಶಿಕ್ಷೆಯನ್ನು ಭಾಗಶಃ ಮಾರ್ಪಡಿಸಿ ಇವರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗುವಂತೆ ತಡೆಹಿಡಿಯುವ ಶಿಕ್ಷೆಯನ್ನು ಸರ್ಕಾರವು ವಿಧಿಸಿದೆ.

1. ಈ ಆದೇಶವು ಶಿಸ್ತು ಪ್ರಾಧಿಕಾರ ಆದೇಶಿಸಿದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.
2. ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದೆ.

ಈ ಆದೇಶವನ್ನು ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ ಪಿಎಸ್‌ಸಿ:139:ಸಿಎನ್‌ಎಸ್ 2004 ದಿನಾಂಕ: 05.02.2005ರ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.524

**ಆರ್. ರಂಗಮಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** 1) ಶ್ರೀ ಟಿ. ಮಲ್ಲೇಶಪ್ಪ, ನಿರ್ದೇಶಕರು, 2) ಶ್ರೀ ಎಸ್. ಬಿ. ಹೊಂಡದಕೇರಿ, 3) ಶ್ರೀ ಕೆ. ಜಿ. ವೆಂಕಟೇಶ್, ಮುಖ್ಯ ಗ್ರಂಥಾಧಿಕಾರಿಗಳು, ಸಾರ್ವಜನಿಕ ಗ್ರಂಥಾಲಯ ಇಲಾಖೆ ಅವರುಗಳ ವಿರುದ್ಧ ಇಲಾಖಾ ವಿಚಾರಣೆ ಹಾಗೂ ಆರೋಪಮುಕ್ತರನ್ನಾಗಿಸಿ, ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ನೋಟೀಸ್ ಸಂಖ್ಯೆ: ಸಿಆಸುಇ 71 ಎಸ್‌ಇಎನ್ 98 ದಿನಾಂಕ: 23.5.2003.
2. ಶ್ರೀ ಟಿ. ಮಲ್ಲೇಶಪ್ಪ, ನಿರ್ದೇಶಕರ ಉತ್ತರ ದಿನಾಂಕ: 28.7.2003.
3. ಶ್ರೀ ಎಸ್. ಬಿ. ಹೊಂಡದಕೇರಿ, ಮುಖ್ಯ ಗ್ರಂಥಾಧಿಕಾರಿ ಅವರ ಉತ್ತರ ದಿನಾಂಕ: 26.07.2003.
4. ಶ್ರೀ ಕೆ. ಜಿ. ವೆಂಕಟೇಶ್, ಮುಖ್ಯ ಗ್ರಂಥಾಧಿಕಾರಿ ಅವರ ಉತ್ತರ ದಿನಾಂಕ: 25.07.2003.
5. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 71 ಎಸ್‌ಇಎನ್ 99 ದಿನಾಂಕ: 27.9.2003.
6. ಶ್ರೀ ವೈ. ಆರ್. ಸಾವಕಾರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರ ವಿಚಾರಣಾ ವರದಿ ದಿನಾಂಕ: 29.05.04.

**ಪ್ರಸ್ತಾವನೆ:**

ಕೇಂದ್ರ ಗ್ರಂಥಾಲಯ, ಜಯನಗರ, ಬೆಂಗಳೂರು ಇಲ್ಲಿ ಮುಖ್ಯ ಗ್ರಂಥಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಗ್ರಂಥಾಲಯ ತಪಾಸಣೆಯನ್ನು ಕಾಲ ಕಾಲಕ್ಕೆ ಕೈಗೊಳ್ಳದೇ ಗ್ರಂಥಲಯದ 5,20,622/ ಪುಸ್ತಕಗಳು ನಾಪತ್ತೆಯಾಗಲು ಕಾರಣರಾಗಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿದ ಆರೋಪಕ್ಕಾಗಿ 1) ಟಿ. ಮಲ್ಲೇಶಪ್ಪ, ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ ಅವರಿಗೂ ಕೇಂದ್ರ ಗ್ರಂಥಾಲಯ ಪಶ್ಚಿಮ ವಲಯ, ಬೆಂಗಳೂರು ಇಲ್ಲಿ ಮುಖ್ಯ ಗ್ರಂಥಾಪಾಲಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಗ್ರಂಥಗಳನ್ನು ಖರೀದಿಸುವಲ್ಲಿ ವಿಹಿತಾಚಾರಗಳನ್ನು ಪಾಲಿಸದ ಆರೋಪಕ್ಕಾಗಿ, 2) ಶ್ರೀ ಎಸ್. ಬಿ. ಹೊಂಡದಕೇರಿ ಹಾಗೂ 3) ಶ್ರೀ ಕೆ. ಜಿ. ವೆಂಕಟೇಶ್, ಮುಖ್ಯ ಗ್ರಂಥಾಧಿಕಾರಿಗಳು, ಸಾರ್ವಜನಿಕ ಗ್ರಂಥಾಲಯ ಇಲಾಖೆ ಅವರುಗಳಿಗೂ ಮೇಲೆ (1)ರಲ್ಲಿ ಓದಲಾದ ದಿನಾಂಕ: 27.05.2003ರ ನೋಟೀಸ್ ನೀಡುವ ಮೂಲಕ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಈ ನೋಟೀಸ್‌ಗೆ ಆರೋಪಿಗಳು ಮೇಲೆ (2) (3) ಮತ್ತು (4)ರಲ್ಲಿ ಓದಲಾದ ದಿನಾಂಕ: 28.7.2003, 26.7.2003 ಹಾಗೂ 25.7.2003ರ ಉತ್ತರಗಳನ್ನು ಸಲ್ಲಿಸಿ ಆರೋಪಗಳನ್ನು ನಿರಾಕರಿಸಿದ್ದಾರೆ. ಆದ್ದರಿಂದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ತೀರ್ಮಾನಿಸಿದ ಸರ್ಕಾರವು ಮೇಲೆ (5)ರಲ್ಲಿ ಓದಲಾದ ದಿನಾಂಕ: 27.9.2003ರ ಸರ್ಕಾರಿ ಆದೇಶದಲ್ಲಿ ಶ್ರೀ ವೈ.

ಆರ್. ಸಾವಕಾರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರವರನ್ನು ವಿಚಾರಣಾಧಿಕಾರಿಗಳಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (6)ರಲ್ಲಿ ಓದಲಾದ ದಿನಾಂಕ: 29.05.2004ರ ವರದಿ ಸಲ್ಲಿಸಿದ ಆಪಾದಿತರುಗಳಾದ ಶ್ರೀ ಟಿ. ಮಲ್ಲೇಶಪ್ಪ, ನಿವೃತ್ತ ನಿರ್ದೇಶಕರು, ಶ್ರೀ ಎಸ್. ಬಿ. ಹೊಂಡದಕೇರಿ, ಹಾಗೂ ಶ್ರೀ ಕೆ. ಜಿ. ವೆಂಕಟೇಶ್, ಮುಖ್ಯ ಗ್ರಂಥಾಲಯಾಧಿಕಾರಿಗಳು ರವರ ಮೇಲೆ ಹೊರಿಸಲಾದ ಆರೋಪಗಳು ಋಜುವಾತಾಗಿರುವುದಿಲ್ಲ ಎಂದು ತಿಳಿಸಿದ್ದಾರೆ. ಈ ಬಗ್ಗೆ ವಿಚಾರಣಾ ವರದಿ ಹಾಗೂ ಮೂಲ ದಾಖಲೆಗಳನ್ನು ಪರಿಶೀಲಿಸಿದೆ. ಸರ್ಕಾರವು ವಿಚಾರಣಾಧಿಕಾರಿಯವರ ವರದಿಯನ್ನು ಒಪ್ಪಿಕೊಂಡು ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 71 ಎಸ್‌ಇಎನ್ 99, ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಶ್ರೀ ಟಿ. ಮಲ್ಲೇಶಪ್ಪ, ನಿವೃತ್ತ ನಿರ್ದೇಶಕರು, ಶ್ರೀ ಎಸ್. ಬಿ. ಹೊಂಡದಕೇರಿ, ಮುಖ್ಯ ಗ್ರಂಥಾಲಯಾಧಿಕಾರಿ, ಶ್ರೀ ಕೆ. ಜಿ. ವೆಂಕಟೇಶ್, ಮುಖ್ಯ ಗ್ರಂಥಾಲಯಾಧಿಕಾರಿ, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಇವರುಗಳ ವಿರುದ್ಧ ಮಾಡಲಾದ ದೋಷಾರೋಪಣೆಗಳಿಂದ ಸದರಿಯವರನ್ನು ದೋಷಮುಕ್ತರನ್ನಾಗಿ ಪರಿಗಣಿಸಿ ಆದೇಶಿಸಿದೆ.

ಈ ವಿಚಾರಣೆ ನಡೆಯದಿದ್ದಲ್ಲಿ ಶ್ರೀ ಟಿ. ಮಲ್ಲೇಶಪ್ಪ, ಶ್ರೀ ಹೊಂಡದಕೇರಿ, ಶ್ರೀ ಕೆ. ಜಿ. ವೆಂಕಟೇಶ್ ರವರುಗಳು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿದ್ದರೋ, ಅಂತಹ ಎಲ್ಲಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.525

**ಎಚ್. ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-3).

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆಯ ಆಳಂದ ತಾಲ್ಲೂಕಿನ ಸಂಗೋಳಗಿ ಗ್ರಾಮದ ಬಳಿ ನಿರ್ಮಿಸಲಾಗುತ್ತಿರುವ ಅಮರ್ಜಾ ಯೋಜನೆಯನ್ನು ಕರ್ನಾಟಕ ನೀರಾವರಿ ನಿಗಮ ನಿಯಮಿತಕ್ಕೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ನೀರಾವರಿ ಯೋಜನೆಗಳ ವಲಯ, ಗುಲ್ಬರ್ಗಾರವರ ಪತ್ರ ಸಂಖ್ಯೆ: ಸಿಇಜಿ: ಐಪಿಜೆಡ್: ಎಇ-7/ಟಿಎ-1/ಎಲ್‌ಎಂಪಿ, ದಿನಾಂಕ: 18.6.2003.

**ಪ್ರಸ್ತಾವನೆ:**

ಗುಲ್ಬರ್ಗಾ ಜಿಲ್ಲೆ ಆಳಂದ ತಾ: ಸಂಗೋಳಗಿ ಗ್ರಾಮದ ಸಮೀಪ ಅಮರ್ಜಾ ನದಿಗೆ ಅಡ್ಡಲಾಗಿ ಅಣೆಕಟ್ಟನ್ನು ನಿರ್ಮಿಸಿದೆ. ಈ ಯೋಜನೆಯಿಂದ ಆಳಂದ ಹಾಗೂ ಅಫಜಲಪುರ ತಾ: ಗಳಲ್ಲಿ 8,903 ಹೆ. ನೀರಾವರಿ ಕಲ್ಪಿಸಲಾಗುವುದು.

ಈ ಮಧ್ಯಮ ನೀರಾವರಿ ಯೋಜನೆಯನ್ನು 1973ರಲ್ಲಿ ಬರಪರಿಹಾರ ಕಾಮಗಾರಿಯಡಿಯಲ್ಲಿ ಪ್ರಾರಂಭಿಸಲಾಯಿತು. ಆಗ ಮೂಲ ಅಂದಾಜು ಮೊತ್ತ ರೂ. 5.70 ಕೋಟಿಗಳು, ಸರ್ಕಾರಿ ಆದೇಶದ ಸಂಖ್ಯೆ: ನೀಇ 70 ಎಂಟಿಜೆಡ್ 95, ದಿನಾಂಕ: 20.4.96ರಲ್ಲಿ ರೂ.57.80 ಕೋಟಿಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡಿದ್ದು ತಾಂತ್ರಿಕ ಅನುಮೋದನೆಯನ್ನು ನೀಡಲಾಗಿದೆ. 2003-04ನೇ ಸಾಲಿನ ದರ ಪಟ್ಟಿಯಂತೆ ಈ ಯೋಜನೆಯ ಪರಿಷ್ಕೃತ ಅಂದಾಜು ಮೊತ್ತ ರೂ.119.45 ಕೋಟಿಗಳಾಗಿದ್ದು, 3/2004 ವರೆಗೆ ರೂ. 102.23 ಕೋಟಿಗಳು ವೆಚ್ಚವಾಗಿದೆ. ಈ ಯೋಜನೆಗಾಗಿ ನಬಾರ್ಡ್ ಅಡಿಯಲ್ಲಿ ರೂ. 22.84 ಕೋಟಿಗಳನ್ನು 1995 ರಿಂದ 1998 ವರೆಗೆ ಸಹಾಯ ಧನವಾಗಿ ಪಡೆಯಲಾಗಿದೆ.

ಈ ಯೋಜನೆಯ ಅಣೆಕಟ್ಟಿನ ಒಟ್ಟು ಉದ್ದ 960 ಮೀ.ಗಳಾಗಿದ್ದು ಇದರಲ್ಲಿ 5 ಗೇಟುಗಳ ಸ್ಪಿಲ್ವೆ ಒಟ್ಟು ಉದ್ದ 77ಮೀ. ಇರುತ್ತದೆ. ಈ ಯೋಜನೆಯ ಜಲಾಶಯದ ಪೂರ್ಣ ಶೇಖರಣೆ ಸಾಮರ್ಥ್ಯ 1.554 ಟಿ.ಎಂ.ಸಿ ಆಗಿದೆ. ಈ ಯೋಜನೆಯಡಿಯಲ್ಲಿ ಮೂರು ಗ್ರಾಮಗಳು ಸಂಗೊಳಗಿ, ರಾಜ್ವಾಲ್ ಮತ್ತು ಗುಲ್‌ಹಳ್ಳಿ ಮುಳುಗಡೆಯಾಗಿದ್ದು ಒಟ್ಟು 1584 ಹೆ. ಜಮೀನು ಒಳಪಟ್ಟಿದ್ದು ನಾಲ್ಕು ಪುನರ್ ವಸತಿ ಕೇಂದ್ರಗಳು ಇರುತ್ತದೆ.

ಬಲದಂಡೆ ಕಾಲುವೆ ಒಟ್ಟ 45 ಕಿ.ಮೀ ಉದ್ದವಿದ್ದು, ಕಿ.ಮೀ 31.745ರಲ್ಲಿ ರೈಲ್ವೇ ಕ್ರಾಸಿಂಗ್ ಕಾಮಗಾರಿಯನ್ನು ಹೊರತುಪಡಿಸಿ, ಉಳಿದ ಮುಖ್ಯ ಕಾಲುವೆ ಕಾಮಗಾರಿಗಳು ಯೋಜನೆಯಂತೆ ಪೂರ್ಣಗೊಳಿಸಲಾಗಿದೆ. ಎಡದಂತೆ ಕಾಲುವೆ ಒಟ್ಟು 55 ಕಿ.ಮೀ ಉದ್ದವಿದ್ದು ಕಿಮೀ. 41.16ರಲ್ಲಿ ರೈಲ್ವೇ ಕ್ರಾಸಿಂಗ್ ಕಾಮಗಾರಿಯನ್ನು ಹೊರತುಪಡಿಸಿ ಮುಖ್ಯ ಕಾಲುವೆಯ ಕಾಮಗಾರಿಗಳು ಯೋಜನೆಯಂತೆ ಪೂರ್ಣಗೊಳಿಸಲಾಗಿದೆ.

ಎಡದಂಡೆ ಕಾಲುವೆಯಡಿಯಲ್ಲಿ ಒಟ್ಟು 40 ವಿತರಣಾ ಕಾಲುವೆಗಳನ್ನು ಯೋಜಿಸಲಾಗಿದೆ ಇವುಗಳಲ್ಲಿ 19 ವಿತರಣಾ ಕಾಲುವೆಗಳನ್ನು ಪೂರ್ಣಗೊಳಿಸಿದೆ, ಉಳಿದ 21 ವಿವಿಧ ಹಂತದಲ್ಲಿ ಪ್ರಗತಿಯಲ್ಲಿದೆ. ಬಲದಂಡೆ ಕಾಲುವೆಯಡಿಯಲ್ಲಿ ಒಟ್ಟು 38 ವಿತರಣಾ ಕಾಲುವೆಗಳಿದ್ದು ಅವುಗಳಲ್ಲಿ 22 ವಿತರಣಾ ಕಾಲುವೆಗಳನ್ನು ಪೂರ್ಣಗೊಳಿಸಿದ್ದು, ಉಳಿದ 16 ಪ್ರಗತಿಯಲ್ಲಿದೆ. ಈ ಯೋಜನೆಯಡಿಯಲ್ಲಿ 8903 ಹೆ. ನೀರಾವರಿಯನ್ನು ಕಲ್ಪಿಸಲು ಯೋಜಿಸಲಾಗಿದೆ.

ಈ ಯೋಜನೆಯಲ್ಲಿ ಹೊಲಗಾಲುವೆ ಕಾಮಗಾರಿಯನ್ನು ಪ್ರಾರಂಭಿಸಬೇಕಾಗಿದ್ದು, ಯೋಜನೆಯಡಿಯಲ್ಲಿ ಕಾಡಾ ಕಾಮಗಾರಿಗಳಿಗಾಗಿ ಒಟ್ಟು ರೂ. 15.40 ಕೋಟಿಗಳ ವಿವರವಾದ ಯೋಜನಾ ವರದಿಯನ್ನು ಕೇಂದ್ರ ಸರ್ಕಾರಕ್ಕೆ ಸಲ್ಲಿಸಲಾಗಿದೆ. ಈಗ ಕೇಂದ್ರ ಸರ್ಕಾರದ ಮಾರ್ಗಸೂಚಿಯಂತೆ ಯೋಜನಾ ವರದಿಯನ್ನು ಮಾರ್ಪಡಿಸಿ ತಯಾರಿಸಲಾಗುತ್ತಿದೆ.

ಎಡದಂಡೆ ಹಾಗೂ ಬಲದಂಡೆ ಕಾಲುವೆಗಳ ಹಾಗೂ ವಿತರಣಾ ಕಾಲುವೆಗಳ ಬಾಕಿ ಉಳಿದಿರುವ ಕಾಮಗಾರಿಗಳನ್ನು ಪೂರ್ಣಗೊಳಿಸಲು ಬೇಕಾಗಿರುವ ಮೊತ್ತ ರೂ. 17.27 ಕೋಟಿಗಳು.

ಸದರಿ ಯೋಜನೆಗೆ 2001-02ನೇ ಸಾಲಿನ ರೂ. 864.10 ಲಕ್ಷಗಳ ಆಯವ್ಯಯದಲ್ಲಿ ಅನುದಾನ, 2002-03ನೇ ಸಾಲಿನಲ್ಲಿ ರೂ.31.00 ಲಕ್ಷಗಳ, 2003-04ನೇ ಸಾಲಿನಲ್ಲಿ ರೂ. 0.05 ಲಕ್ಷಗಳು ಹಾಗೂ 2004-05ನೇ ಸಾಲಿನಲ್ಲಿ ರೂ. 91.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿತ್ತು.

ಈಗಾಗಲೇ, ಬೆಣ್ಣೆತೋರಾ ನೀರಾವರಿ ಯೋಜನೆ ಹಾಗೂ ಮುಲ್ಲಾಮಾರಿ ಕೆಳದಂಡೆ ನೀರಾವರಿ ಯೋಜನೆಗಳನ್ನು ಕರ್ನಾಟಕ ನೀರಾವರಿ ನಿಗಮ ನಿಯಮಿತಕ್ಕೆ ವರ್ಗಾಯಿಸುವ ಮುನ್ನ ಆರ್ಥಿಕ ಇಲಾಖೆಯ ಅಭಿಪ್ರಾಯವನ್ನು ಪಡೆದಿರುವಂತೆ ಈ ಸಂದರ್ಭದಲ್ಲೂ ಆರ್ಥಿಕ ಇಲಾಖೆಯ ಅಭಿಪ್ರಾಯವನ್ನು ಪಡೆಯಲಾಗಿದೆ.

ಕರ್ನಾಟಕ ನೀರಾವರಿ ನಿಗಮ ನಿಯಮಿತ, ವ್ಯವಸ್ಥಾಪಕ ನಿರ್ದೇಶಕರು ದಿನಾಂಕ: 24.2.2005ರ ಪತ್ರದ ಸಂಖ್ಯೆ: ಕೆಎನ್‌ಎನ್/ಅಮರ್ಜಾ/1 /ಎಇ6/05-06/4826ರಲ್ಲಿ ಅಮರ್ಜಾ ಯೋಜನೆ ನಿಗಮಕ್ಕೆ ವರ್ಗಾಯಿಸುವ ಕುರಿತು ದಿನಾಂಕ: 22.2.2005 ರಂದು ನಡೆದ ನಿಗಮದ 24ನೇ ನಿರ್ದೇಶಕರ

ಮಂಡಳಿಯ ಸಭೆಯಲ್ಲಿ ಹೆಚ್ಚುವರಿ ವಿಷಯವಾಗಿ ಮಂಡಿಸಲಾಯಿತು. ಯೋಜನೆಯನ್ನು ಸಂಪೂರ್ಣಗೊಳಿಸಲು ಬಾಕಿ ಉಳಿದಿರುವ ಕಾಮಗಾರಿಗಳು, ಈ ಹಿಂದೆ ಪೂರ್ಣಗೊಳಿಸಿರುವ ಕಾಲುವೆ ಜಾಲದಲ್ಲಿ ಇರುವ ತೊಡಕುಗಳನ್ನು ಸರಿಪಡಿಸಿ ಕಾಲುವೆಯಲ್ಲಿ ಸಮರ್ಪಕವಾಗಿ ನೀರು ಹರಿಸಲು ತೆಗೆದುಕೊಳ್ಳಬೇಕಾಗಿರುವ ತಿದ್ದುಪಡಿ ಕಾಮಗಾರಿಗಳು, ಭೂಸ್ವಾಧೀನ, ಇತ್ಯಾದಿಗಳಿಗೆ ಸುಮಾರು ರೂ.100.00 ಕೋಟಿಗಳು ವೆಚ್ಚ ಮಾಡಬೇಕಾಗಿದೆ ಎಂದು ಅಂದಾಜಿಸಲಾಗಿದ್ದು, ಈ ಹಣವನ್ನು ಸರ್ಕಾರ ಬಜೆಟ್/ ಐಇಬಿಆರ್ ಹಂಚಿಕೆ ಮೂಲಕ ಅಮರ್ಜಾ ಯೋಜನೆಗಾಗಿಯೇ ಒದಗಿಸಬೇಕೆಂಬ ಕೋರಿಕೆಯೊಂದಿಗೆ ನಿಗಮವು ಪ್ರಸ್ತುತ ಯೋಜನೆಯನ್ನು ಕೈಗೆತ್ತಿಕೊಂಡು ಆದಷ್ಟು ಬೇಗ ಪೂರ್ಣಗೊಳಿಸುವುದೆಂದು ಸರ್ಕಾರಕ್ಕೆ ತಿಳಿಸುವಂತೆ ನಿರ್ದೇಶಕರ ಮಂಡಳಿಯು ಅಭಿಪ್ರಾಯಪಟ್ಟಿದ್ದು, ಈ ಅಭಿಪ್ರಾಯದನ್ವಯ ಮುಂದಿನ ಕ್ರಮ ಕೈಗೊಳ್ಳಬಹುದಾಗಿದೆಯೆಂದು ತಿಳಿಸಿರುತ್ತಾರೆ.

ಈ ಮೇಲೆ ವಿವರಿಸಿರುವಂತೆ ಈ ಯೋಜನೆಯನ್ನು ಪೂರ್ಣಗೊಳಿಸಲು ಸಾಕಷ್ಟು ವಿಳಂಬವಾಗಿರುವುದನ್ನು ಪರಿಗಣಿಸಿ, ಈ ಯೋಜನೆಯನ್ನು ಶೀಘ್ರದಲ್ಲಿ ಪೂರ್ಣಗೊಳಿಸಲು ನಿರ್ಧರಿಸಿ, ಈ ಯೋಜನೆಯನ್ನು ಕರ್ನಾಟಕ ನೀರಾವರಿ ನಿಗಮದ ವ್ಯಾಪ್ತಿಗೆ ಒಳಪಡಿಸಲು ಪ್ರಸ್ತಾಪಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಜಸಂಇ 29 ಎಂಟಿಜೆಡ್ 2004, ಬೆಂಗಳೂರು ದಿನಾಂಕ: 18ನೇ ಏಪ್ರಿಲ್ 2005**

ಗುಲ್ಬರ್ಗಾ ಜಿಲ್ಲೆಯ ಆಳಂದ ತಾಲ್ಲೂಕಿನ ಸಂಗೋಳಗಿ ಗ್ರಾಮದ ಬಳಿ ನಿರ್ಮಿಸಲಾಗುತ್ತಿರುವ ಅಮರ್ಜಾ ಮಧ್ಯಮ ನೀರಾವರಿ ಯೋಜನೆಯನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕರ್ನಾಟಕ ನೀರಾವರಿ ನಿಗಮ ನಿಯಮಿತ ವ್ಯಾಪ್ತಿಗೆ ಒಳಪಡಿಸುವಂತೆ ಹಸ್ತಾಂತರಿಸಿ 2005-06ನೇ ಸಾಲಿನಲ್ಲಿ ಸದರಿ ಯೋಜನೆಯ ಎಲ್ಲಾ ಕಾಮಗಾರಿಗಳನ್ನು ಪೂರ್ಣಗೊಳಿಸಲು ಕ್ರಮ ಕೈಗೊಳ್ಳುವಂತೆ ಆದೇಶಿಸಲಾಗಿದೆ.

ಈ ಆದೇಶ ಹೊರಡಿಸಿದ ದಿನದಿಂದ ಈ ಯೋಜನೆಗೆ ಸಂಬಂಧಿಸಿದ ಎಲ್ಲಾ ಆಸ್ತಿ ಮತ್ತು ಋಣವನ್ನು ಸಹ ಕರ್ನಾಟಕ ನೀರಾವರಿ ನಿಗಮ ನಿಯಮಿತಕ್ಕೆ ವರ್ಗಾಯಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಪಿಡಬ್ಲ್ಯೂಡಿ 86 ಎಫ್‌ಸಿ-1 2005ರಲ್ಲಿ ನೀಡಿರುವ ಒಪ್ಪಿಗೆ ಅನುಸಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್.526
**ಐ. ಡಿ. ಧಮನ್**
ಸರ್ಕಾರದ ಅಧೀನ ಕಾರ್ಯದರ್ಶಿ(ತಾಂತ್ರಿಕ),
ಜಲ ಸಂಪನ್ಮೂಲ ಇಲಾಖೆ, (ಕೃಭಾಜನಿನಿ ವಿ. ಕೋಶ).

## HOME SECRETARIAT

**Sub :** Authorisation of Sri. M. H. ITAGI, 8th Additional Public Prosecutor of Additional City Civil and Sessions Court, Bangalore to appear and conduct the Dandupalya Krishna gang cases and Bomb blast cases before the designated court in addition to his regular duties.

**Read :**
1. G. O. No. LAW 273 LCE 2000, dated: 17.07.2003.
2. G. O. No. LAW 4360 LCM 2002, dated: 21.07.2003.
3. Letter No. DPN:ADM:27-2003-04, dated: 26.10.2004.

**Preamble:**

The Director of Prosecutions, Bangalore vide his letter referred to at (3) has requested to authorise Sri. M. H. Itagi, 8th Additional Public Prosecutor of Additional City Civil and Sessions Court, Bangalore to appear and conduct the Dandupalya Krishna gang cases and Bomb blast cases before the Designated Court in addition to his regular duties. Government after careful consideration is pleased to issue the following order.

**Government Order No. HD 176 PPE 2005, Bangalore dated: 1st April 2005**

In Supercession/ Modification of earlier order read at (2) above, Sri M. H. Itagi, 8th Additional Public Prosecutor, Additional City Civil and Sessions Court, Bangalore is hereby authorised to appear and conduct the Dandupalya Krishna cases and Bomb blast cases before the Designated Court in addition to his regular duties.

By Order and in the Name of the Governor of Karnataka,
**H. K. Gundurao**
PR-527
Under Secretary to Government,
Home Department. (L & O & Cofeposa & Prosecution).

**ಕರ್ನಾಟಕ ಸರ್ಕಾರದ ಸಚಿವಾಲಯ**

**ಸುವರ್ಣ ಕರ್ನಾಟಕ-2006**

**ಸುತ್ತೋಲೆ**

**ಸಂಖ್ಯೆ: ಸಂಕಇ 30 ಕರಅ 05 ಬೆಂಗಳೂರು, ದಿನಾಂಕ: 11ನೇ ಏಪ್ರಿಲ್ 2005**

ಕರ್ನಾಟಕ ರಾಜ್ಯವು ಏಕೀಕರಣಗೊಂಡು 1ನೇ ನವೆಂಬರ್ 2006ಕ್ಕೆ 50 ವರ್ಷಗಳಾಗುವ ಸಂದರ್ಭದಲ್ಲಿ ಈ 2006ನೇ ವರ್ಷವನ್ನು ಸುವರ್ಣ ಕರ್ನಾಟಕ ವರ್ಷ ವೆಂದು ಅರ್ಥಪೂರ್ಣವಾಗಿ ಆಚರಿಸಲು ಸರ್ಕಾರವು ಉದ್ದೇಶಿಸಿದೆ. ಹಾಗೂ ಈ ಪ್ರಯುಕ್ತ ಸುವರ್ಣ ಕರ್ನಾಟಕ ಆಚರಣೆಗೆ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದು, ಸರ್ಕಾರದ ಎಲ್ಲಾ ಪತ್ರಗಳು ಮತ್ತು ಲಕೋಟೆಗಳ ಮೇಲೆ ಸುವರ್ಣ ಕರ್ನಾಟಕ-2006 ಎಂದು ಮುದ್ರಿಸುವ ವಿಷಯದಲ್ಲಿ ಮಾನ್ಯ ಕಂದಾಯ ಹಾಗೂ ಸಂಸದೀಯ ವ್ಯವಹಾರಗಳ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ದಿನಾಂಕ: 10.12.2004ರ

ಸಚಿವಸಂಪುಟದ ಉಪ ಸಮಿತಿಯ ಸಭೆಯಲ್ಲಿ ಈ ತೀರ್ಮಾನವನ್ನು ತೆಗೆದುಕೊಳ್ಳಲಾಗಿದೆ. ಅಂತೆಯೇ ಈ ಬಗ್ಗೆ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೆ ಸೂಕ್ತ ಸೂಚನೆಯನ್ನು ನೀಡಲಾಗಿದೆ.

ಈ ದಿಸೆಯಲ್ಲಿ ಸರ್ಕಾರದ ಇತರೆ ಎಲ್ಲಾ ಇಲಾಖಾ ಪ್ರಧಾನ ಕಾರ್ಯದರ್ಶಿಗಳು: ಕಾರ್ಯದರ್ಶಿಗಳು ಮತ್ತು ಮುಖ್ಯಸ್ಥರುಗಳು ಅವರ ಅಧೀನದಲ್ಲಿ ಬರುವ ಕ್ಷೇತ್ರ ಇಲಾಖೆಗಳು, ಜಿಲ್ಲಾ ಕಛೇರಿಗಳು, ಸರ್ಕಾರದಿಂದ ಅನುದಾನ ಪಡೆಯುವ ಸ್ವಾಯುತ್ತ ಸಂಸ್ಥೆಗಳು: ನಿಗಮಗಳು, ಎಲ್ಲಾ ಸರ್ಕಾರಿ ಶಿಕ್ಷಣ ಸಂಸ್ಥೆಗಳು (ಅನುದಾನಿತ ಮತ್ತು ಅನುದಾನ ರಹಿತ ಸಂಸ್ಥೆಗಳನ್ನೊಳಗೊಂಡಂತೆ) ಪತ್ರ ವ್ಯವಹಾರಗಳ ಬಗ್ಗೆ ತಮ್ಮದೇ ಆದ ಮೂಲ ಸೌಲಭ್ಯಗಳನ್ನು ಹೊಂದಿರುವುದರಿಂದ ಈ ಎಲ್ಲಾ ಸರ್ಕಾರಿ ಇಲಾಖೆಗಳು ಮತ್ತು ಸಂಸ್ಥೆಗಳು ಪತ್ರಗಳನ್ನು ಮತ್ತು ಲಕೋಟೆಗಳನ್ನು ಮುದ್ರಿಸುವ ವೇಳೆಯಲ್ಲಿ ಅಂತಹ ಪತ್ರ ಮತ್ತು ಲಕೋಟೆಗಳ ಮೇಲೆ ತಪ್ಪದೇ **ಸುವರ್ಣ ಕರ್ನಾಟಕ - 2006** ಎಂದು ಮುದ್ರಿಸುವ ವ್ಯವಸ್ಥೆಯನ್ನು ಮಾಡಬೇಕೆಂಬ ಸರ್ಕಾರದ ನಿರ್ದೇಶನವನ್ನು ಈ ಸುತ್ತೋಲೆ ಮೂಲಕ ತಿಳಿಸಲಾಗಿದೆ.

ಅಂತೆಯೇ ಈ ಉದ್ದೇಶವನ್ನು ಗಮನದಲ್ಲಿರಿಸಿಕೊಂಡು ಎಲ್ಲಾ ಇಲಾಖಾ ಪ್ರಧಾನ ಕಾರ್ಯದರ್ಶಿಗಳು: ಕಾರ್ಯದರ್ಶಿಗಳು: ಇಲಾಖಾ ಮುಖ್ಯಸ್ಥರುಗಳಿಗೆ ಅವರ ಆಡಳಿತಾತ್ಮಕ ಅಡಿ ಬರುವ ಎಲ್ಲಾ ಇಲಾಖೆಗಳು: ಸ್ವಾಯುತ್ತ ಸಂಸ್ಥೆಗಳು: ನಿಗಮಗಳು ಮತ್ತು ಶಿಕ್ಷಣ ಸಂಸ್ಥೆಗಳು ಸೂಕ್ತ ಸೂಚನೆಗಳನ್ನು ಹೊರಡಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

**ವಿಜಯ ಗೋರೆ**

ಪಿ.ಆರ್.529 ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬೀದರ್ ಜಿಲ್ಲೆ ಔರಾದ್ ತಾಲ್ಲೂಕಿನ ಖಂಡಿಕೇರಿ ಸಣ್ಣ ನೀರಾವರಿ ಕೆರೆ ಕಾಮಗಾರಿ ಗುತ್ತಿಗೆದಾರರಾದ ಶ್ರೀ ಡಿ. ವೈ. ಉಪ್ಪಾರ್ ಇವರ ಏಕಮಧ್ಯಸ್ಥಿಕೆ ಪ್ರಕರಣದಲ್ಲಿ ನ್ಯಾಯಾಲಯದ ಆದೇಶದಂತೆ ಹಣ ಪಾವತಿಸುವ ಕುರಿತು.

**ಉಲ್ಲೇಖ :** ಮುಖ್ಯ ಅಭಿಯಂತರರು, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ: 14.10.2004ರ ಪತ್ರಸಂಖ್ಯೆ: ಸಿಇಎಂ(ಐ)/ ಬಿಜೆಪಿ/ ಇಎ-6/04-05/4960.

**ಪ್ರಸ್ತಾವನೆ:**

ಬೀದರ್ ಜಿಲ್ಲೆ ಔರಾದ್ ತಾಲ್ಲೂಕಿನ ಖಂಡಿಕೇರಿ ಕೆರೆ ಯೋಜನೆಯನ್ನು ವಿಶ್ವ ಬ್ಯಾಂಕ್ ನೆರವಿನೊಂದಿಗೆ ಟೆಂಡರ್ ಆಧಾರದ ಮೇಲೆ ಶ್ರೀ ಡಿ. ವೈ. ಉಪ್ಪಾರ್, 1ನೇ ದರ್ಜೆ ಗುತ್ತಿಗೆದಾರರು ಇವರಿಗೆ ವಹಿಸಿ ನಿರ್ಮಾಣ ಮಾಡಲಾಗಿದೆ. ಗುತ್ತಿಗೆದಾರರು ಹಾಗೂ ಇಲಾಖೆಯೊಂದಿಗೆ ಉಂಟಾದ ವಿವಾದಗಳನ್ನು ಇತ್ಯರ್ಥಗೊಳಿಸಲು ಶ್ರೀ ತಿಮ್ಮಪ್ಪ ಮಾಚಾರ್ಲಾ, ಅಧೀಕ್ಷಕ ಅಭಿಯಂತರರು, ಕೃಷ್ಣಾ ಮೇಲ್ದಂಡೆ ಯೋಜನೆ ಫೀಲ್ಡ್ ಕೆನಾಲ್ ವಲಯ ನಂ.1, ಹಸನಾಪುರ ಇವರನ್ನು ಮಧ್ಯಸ್ಥಿಕೆದಾರರನ್ನಾಗಿ ದಿನಾಂಕ: 16.8.1989ರಲ್ಲಿ ನೇಮಕ ಮಾಡಲಾಗಿತ್ತು. ಏಕಮಧ್ಯಸ್ಥಿಕೆದಾರರು ದಿನಾಂಕ: 29.3.1990 ರಂದು ರೂ. 16,14,174.69 ಮೊತ್ತವನ್ನು ಗುತ್ತಿಗೆದಾರರಿಗೆ ಪಾವತಿ ಮಾಡುವಂತೆ ಐತೀರ್ಪು ನೀಡಿರುತ್ತಾರೆ.

2) ಏಕಮಧ್ಯಸ್ಥಿಕೆದಾರರ ದಿನಾಂಕ: 29.3.1990ರ ತೀರ್ಪನ್ನು ವಿರೋಧಿಸಿ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರ ನ್ಯಾಯಾಲಯ, ಬೀದರ್ ಇಲ್ಲಿ ಸಿವಿಲ್ ದಾವೆ ಹೂಡಲಾಗಿತ್ತು (ಎಸಿ-1/1990) ಸದರಿ ನ್ಯಾಯಾಲಯವು ದಿನಾಂಕ: 2.2.1991 ರಂದು ತೀರ್ಪು ನೀಡಿದ್ದು, ಏಕಮಧ್ಯಸ್ಥಿಕೆದಾರರ ತೀರ್ಮಾನವನ್ನೇ ನ್ಯಾಯಾಲಯದ ಆದೇಶವೆಂದು ಪರಿಗಣಿಸಿ ಗುತ್ತಿಗೆದಾರರಿಗೆ ಏಕಮಧ್ಯಸ್ಥಿಕೆದಾರರು ಮಂಜೂರು ಮಾಡಿರುವ ಹಣವನ್ನು ಡಿಕ್ರಿ ದಿನಾಂಕದಿಂದ ವಾರ್ಷಿಕ ಶೇಕಡ 18 ರಂತೆ ಬಡ್ಡಿ ಸೇರಿಸಿ ಪಾವತಿ ಮಾಡುವಂತೆ ಆದೇಶಿಸಿರುತ್ತದೆ.

3) ನಂತರ, ಬೀದರ್ ಸಿವಿಲ್ ನ್ಯಾಯಾಲಯದ ದಿನಾಂಕ: 2.2.1991ರ ತೀರ್ಪನ್ನು ಪ್ರಶ್ನಿಸಿ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಲಾಗಿತ್ತು (ಮೇಲ್ಮನವಿ ಸಂಖ್ಯೆ ಎಂ.ಎಫ್.ಎ. ನಂ: 1325/1991). ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ: 15.12.1992 ರಂದು ಮಧ್ಯಂತರ ತೀರ್ಪು ನೀಡಿ ಬೀದರ್ ಸಿವಿಲ್ ನ್ಯಾಯಾಲಯದ ಆದೇಶದ ಜಾರಿಗೆ ತಾತ್ಕಾಲಿಕ ತಡೆಯಾಜ್ಞೆ ನೀಡಿತ್ತು. ನಂತರ 19.4.1993 ರಂದು ಮತ್ತೊಂದು ಮಧ್ಯಂತರ ತೀರ್ಪು ನೀಡಿ, ತೀರ್ಪಿನಲ್ಲಿ ದಿನಾಂಕ: 15.12.1992ರ ತಡೆಯಾಜ್ಞೆಯನ್ನು ಮುಂದುವರಿಸಿ ಏಕಮಧ್ಯಸ್ಥಿಕೆದಾರರು ಮಂಜೂರು ಮಾಡಿರುವ ಮೊತ್ತದ ಶೇಕಡ 50 ರಷ್ಟನ್ನು ನ್ಯಾಯಾಲಯದಲ್ಲಿ ಠೇವಣಿ ಇಡುವಂತೆ ಸರ್ಕಾರಕ್ಕೆ ಸೂಚಿಸಿತ್ತು. ಅದರಂತೆ ಸರ್ಕಾರವು ದಿನಾಂಕ: 15.9.1993 ರಂದು ರೂ. 9,33,704/- ಮೊತ್ತವನ್ನು ಬೀದರ್‌ನ ಸಿವಿಲ್ ನ್ಯಾಯಾಲಯದಲ್ಲಿ ಠೇವಣಿ ಮಾಡಿತ್ತು.

4) ನಂತರ, ಕರ್ನಾಟಕ ಉಚ್ಚ ನ್ಯಾಯಾಲಯವು ದಿನಾಂಕ: 6.7.1999 ರಂದು ನೀಡಿದ ತೀರ್ಪಿನಲ್ಲಿ ಸರ್ಕಾರದ ಮೇಲ್ಮನವಿಯನ್ನು ತಿರಸ್ಕರಿಸಿತ್ತು. ಆದರೆ, ಬೀದರ್ ಸಿವಿಲ್ ನ್ಯಾಯಾಲಯ ಮಂಜೂರು ಮಾಡಿದ್ದ ಅವಾರ್ಡ್ ಮೊತ್ತದ ಮೇಲಿನ ವಾರ್ಷಿಕ ಬಡ್ಡಿ ದರವನ್ನು ಶೇಕಡ 18 ರಿಂದ 6ಕ್ಕೆ ಕಡಿಮೆ ಮಾಡಿರುತ್ತದೆ.

5) ಕರ್ನಾಟಕ ಉಚ್ಚ ನ್ಯಾಯಾಲಯದ ದಿನಾಂಕ: 6.7.1999 ರಂದು ನೀಡಿದ ತೀರ್ಪನ್ನು ವಿರೋಧಿಸಿ ಗುತ್ತಿಗೆದಾರರು ಸದರಿ ನ್ಯಾಯಾಲಯದಲ್ಲಿ ಪರಿಶೀಲನಾ ದಾವೆ ಸಲ್ಲಿಸಿದ್ದರು (ಸಿವಿಲ್ ದಾವೆ ಸಂಖ್ಯೆ: 675/1999) ದಾವೆಯನ್ನು ಆಲಿಸಿದ ನ್ಯಾಯಾಲಯವು ದಿನಾಂಕ: 15.3.2002 ರಂದು ಅಂತಿಮ ಆದೇಶ ನೀಡಿ ಬೀದರ್ ಸಿವಿಲ್ ನ್ಯಾಯಾಲಯದ ಆದೇಶವನ್ನು ದೃಢೀಕರಿಸಿದ್ದು ಬಡ್ಡಿ ದರವನ್ನು ಶೇಕಡ 15ಕ್ಕೆ ನಿಗದಿಪಡಿಸಿರುತ್ತದೆ.

6) ನ್ಯಾಯಾಲಯದ ಆದೇಶದ ಜಾರಿಗಾಗಿ ಗುತ್ತಿಗೆದಾರರು ದಿನಾಂಕ: 2.8.2001 ರಂದು ಬೀದರ್ ಸಿವಿಲ್ ನ್ಯಾಯಾಲಯದಲ್ಲಿ ಜಾರಿ ದಾವೆ ಹೂಡಿರುತ್ತಾರೆ (ದಾವೆ ಸಂಖ್ಯೆ: 96/2003).

7) ನ್ಯಾಯಾಲಯದ ಆದೇಶದಂತೆ ಗುತ್ತಿಗೆದಾರರಿಗೆ ಪಾವತಿ ಮಾಡಬೇಕಾದ ಅಸಲು ಮತ್ತು ಬಡ್ಡಿಮೊತ್ತವನ್ನು ಈ ಕೆಳಕಂಡಂತೆ ಲೆಕ್ಕ ಹಾಕಲಾಗಿದೆ.

| ಕ್ರ.ಸಂ. | ವಿವರಗಳು | ಅಸಲು | ಬಡ್ಡಿ | ಪಾವತಿಸಬೇಕಾದ ಮೊತ್ತ |
|---|---|---|---|---|
| 1. | ದಿನಾಂಕ 29.03.1990 ರಂದು ಏಕಮಧ್ಯಸ್ಥಿಕೆದಾರರು ಅವಾರ್ಡ್ ಮಾಡಿದ ಮೊತ್ತ | 1614175 | | |
| 2. | ಅವಾರ್ಡ್ ಮೊತ್ತಕ್ಕೆ ಅವಾರ್ಡ್ ದಿನಾಂಕ 29.3.1990 ರಿಂದ ನ್ಯಾಯಾಲಯದ ಡಿಕ್ರಿ ದಿನಾಂಕ: 2.2.1991 ರವರೆಗೆ 308 ದಿನಗಳಿಗೆ ವಾರ್ಷಿಕ ಶೇಕಡ 15 ರಂತೆ ಲೆಕ್ಕ ಹಾಕಲಾದ ಬಡ್ಡಿ | | 205641 | 205641 |

| ಕ್ರ.ಸಂ. | ವಿವರಗಳು | ಅಸಲು | ಬಡ್ಡಿ | ಪಾವತಿಸಬೇಕಾದ ಮೊತ್ತ |
|---|---|---|---|---|
| 3. | ಅವಾರ್ಡ್ ಮೊತ್ತಕ್ಕೆ ನ್ಯಾಯಾಲಯದ ಡಿಕ್ರಿ ದಿನಾಂಕ: 2.2.1991 ರಿಂದ ನ್ಯಾಯಾಲಯದ ಆದೇಶದಂತೆ ನ್ಯಾಯಾಲಯದಲ್ಲಿ ಠೇವಣಿ ಇಡಲಾದ ದಿನಾಂಕ: 15.9.1993 ರವರೆಗೆ 956 ದಿನಗಳಿಗೆ ವಾರ್ಷಿಕ ಶೇಕಡ 15 ರಂತೆ ಲೆಕ್ಕ ಹಾಕಲಾದ ಬಡ್ಡಿ | | 634172 | 634172 |
| 4. | ದಿನಾಂಕ: 15.9.1993 ರಂದು ನ್ಯಾಯಾಲಯದಲ್ಲಿ ಠೇವಣಿ ಇಡಲಾದ ಮೊತ್ತ | 933704 | | |
| 5. | ಪಾವತಿ ಮಾಡಬೇಕಾದ ಬಾಕಿ ಅಸಲು ಮೊತ್ತ | 680471 | | 680471 |
| 6. | ಪಾವತಿ ಮಾಡಬೇಕಾದ ಬಾಕಿ ಅಸಲು ಮೊತ್ತದ ಮೇಲೆ ದಿನಾಂಕ: 15.9.1993 ರಿಂದ 31.3.2005 ರವರೆಗೆ 4215 ದಿನಗಳಿಗೆ ವಾರ್ಷಿಕ ಶೇಕಡ 15 ರಂತೆ ಲೆಕ್ಕ ಹಾಕಲಾದ ಬಡ್ಡಿ | | 1178706 | 1178706 |
| | ಒಟ್ಟು ಪಾವತಿ ಮಾಡಬೇಕಾದ ಮೊತ್ತ | | | 2698990 |

3) ಸರ್ಕಾರದ ಮಟ್ಟದಲ್ಲಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 6 ಡಬ್ಲ್ಯೂಟಿಎಸ್ 1989 ಬೆಂಗಳೂರು, ದಿನಾಂಕ: 13ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೀದರ್ ಜಿಲ್ಲೆ ಔರಾದ್ ತಾಲ್ಲೂಕಿನ ಖಂಡಿಕೇರಿ ಸಣ್ಣ ನೀರಾವರಿ ಕೆರೆ ಕಾಮಗಾರಿಯ ಏಕಮಧ್ಯಸ್ಥಿಕೆ ಪ್ರಕರಣಕ್ಕೆ ಸಂಬಂಧಿಸಿದಂತೆ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರ ನ್ಯಾಯಾಲಯ, ಬೀದರ್ ಮತ್ತು ಕರ್ನಾಟಕ ಉಚ್ಚ ನ್ಯಾಯಾಲಯಗಳ ಅಂತಿಮ ಆದೇಶದ ಅನುಸಾರ ಲೆಕ್ಕಾಚಾರ ಮಾಡಲಾಗಿರುವ ಮೊತ್ತ ರೂ. 26,98,990 (ರೂಪಾಯಿ ಇಪ್ಪತ್ತಾರು ಲಕ್ಷ ತೊಂಭತ್ತೆಂಟು ಸಾವಿರದ ಒಂಭೈನೂರು ತೊಂಭತ್ತು ಮಾತ್ರ) ಅನ್ನು ಅಂತಿಮ ಮೊತ್ತವಾಗಿ ಕಾಮಗಾರಿಯ ಗುತ್ತಿಗೆದಾರರಾದ ಶ್ರೀ ಡಿ. ವೈ. ಉಪ್ಪಾರ್ ಇವರಿಗೆ ಪಾವತಿಸಲು ಸರ್ಕಾರದ ಅನುಮೋದನೆಯನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ನೀಡಲಾಗಿದೆ.

1) ಸದರಿ ಪ್ರಕರಣವು ಮುಕ್ತಾಯವಾಗಿದೆಯೆಂದು ಮತ್ತು ಸದರಿ ಪ್ರಕರಣದಲ್ಲಿ ಗುತ್ತಿಗೆದಾರರಿಗೆ ಪಾವತಿಸಬೇಕಾದ ಯಾವುದೇ ಹಣವು ಬಾಕಿ ಇರುವುದಿಲ್ಲವೆಂದು ಗುತ್ತಿಗೆದಾರರಿಂದ ಮುಚ್ಚಳಿಕೆ ಬರೆಸಿಕೊಂಡು ನಂತರ ಹಣ ಪಾವತಿಸುವುದು.

2) ಸದರಿ ಗುತ್ತಿಗೆದಾರರಿಂದ ಸರ್ಕಾರಕ್ಕೆ ಬರಬೇಕಾದ ಯಾವುದೇ ಬಾಬು ಬಾಕಿ ಇದ್ದಲ್ಲಿ ಆ ಮೊತ್ತವನ್ನು ಈಗ ಪಾವತಿಸುತ್ತಿರುವ ಹಣದಲ್ಲಿ ಕಡಿತ ಮಾಡತಕ್ಕದ್ದು.

3) ಹಣ ಭರವಸೆ ಪತ್ರ ಬಿಡುಗಡೆಯಾದ ನಂತರ ಹಣ ಪಾವತಿ ಮಾಡಿದ ಬಗ್ಗೆ ಒಂದು ವಾರದೊಳಗಾಗಿ ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು.

2) ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ: 22.3.2005ರ ಟಿಪ್ಪಣಿ ಸಂಖ್ಯೆ: ಲೋಇ/209/ಆಕೋ-1/2005 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.530

**ಎಂ. ಎನ್. ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ, (ಸಣ್ಣ ನೀರಾವರಿ).

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಟಿ.ಎಸ್. ಶಂಕರ್, ಎಆರ್‌ಎಸ್‌ಐ, ಇವರ ಪರಿಷ್ಕರಣಾ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಮತ್ತು ಡಿಸಿಪಿ ಸಿಎಆರ್ (ಕೇಂದ್ರ ಸ್ಥಾನ) ಬೆಂಗಳೂರು ಇವರ ಆದೇಶ ಸಂಖ್ಯೆ: ಡಿಇ:16:01-02 ಆ.ಪ್ರ. ಸಂಖ್ಯೆ:14:2002-03, ದಿನಾಂಕ: 09.08.2002.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಹೆಚ್ಚುವರಿ ಪೊಲೀಸ್ ಆಯುಕ್ತರು (ಆಡಳಿತ ಮತ್ತು ಸಿಎಆರ್) ಬೆಂಗಳೂರು ನಗರ ಆದೇಶ ಸಂಖ್ಯೆ: 30:ಅಪೀಲು:2002-03, ದಿನಾಂಕ: 31.12.2002 ಓ.ಬಿ. ಸಂಖ್ಯೆ: 622:02.
3. ಅರ್ಜಿದಾರರ ಪರಿಷ್ಕರಣಾ ಮೇಲ್ಮನವಿ ಅರ್ಜಿ ದಿನಾಂಕ: 06.03.2003.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂ. ಅಪೀಲು:2:1:2003-04, ದಿನಾಂಕ: 24.02.2004.
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಡಿಎಸ್‌ಪಿ:94:ಪಿಎನ್‌ಎಸ್:2004, ದಿನಾಂಕ: 07.12.2004 ಮತ್ತು 22.03.2005.

**ಪ್ರಸ್ತಾವನೆ:**

ಶ್ರೀ ಪಿ.ಎಸ್. ಶಂಕರ್, ಎಆರ್‌ಎಸ್‌ಐ, ಸಿಎಆರ್ (ಕೇಂದ್ರ) ಬೆಂಗಳೂರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರ ವಿರುದ್ಧ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

1. ಎಆರ್‌ಎಸ್‌ಐ ಶ್ರೀ ಟಿ.ಎಸ್. ಶಂಕರ್ "ಬಿ" ವಿಭಾಗ ಸಿಎಆರ್ (ಕೇಂದ್ರ) ಬೆಂಗಳೂರು ಆದ ನೀವು ಸಿರ್ಸಿ ವೃತ್ತದ ಪೊಲೀಸ್ ಕಾಲೋನಿಯ ಸಂಖ್ಯೆ: ಎಸ್ 39 ವಸತಿ ಗೃಹದಲ್ಲಿ ವಾಸವಾಗಿದ್ದು ಸದರಿ ಮನೆಯ ಹಿಂಬದಿಯ ಕಾಂಪೌಂಡಿನಲ್ಲಿ ಒಂದು ಸಂಖ್ಯೆಯ ಸುಮಾರು 10-15 ವರ್ಷದ ದೊಡ್ಡ ಫಲ ಬಿಡುವ ಮಾವಿನ ಮರವನ್ನು ಮೇಲಾಧಿಕಾರಿಗಳಿಗೆ ವಿಷಯವನ್ನು ತಿಳಿಸದೇ ಸ್ವಂತ ಲಾಭಕ್ಕೆ ಎಂದು ಉದ್ದೇಶ ಪೂರ್ವಕವಾಗಿ ಬುಡ ಸಮೇತ ಕಡಿದು ತುಂಡು ತುಂಡಾಗಿ ಮಾಡಿದ್ದು ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ಹಾಗೂ ಉದಾಸೀನತೆಯನ್ನು ತೋರಿಸಿರುತ್ತೀರಿ."

2. ಎಆರ್‌ಎಸ್‌ಐ ಶ್ರೀ ಟಿ.ಎಸ್. ಶಂಕರ್ 'ಬಿ' ವಿಭಾಗ ಸಿಎಆರ್ (ಕೇಂದ್ರ) ಬೆಂಗಳೂರು ಆದ ನೀವು ಒಂದು ಪೊಲೀಸ್ ಅಧಿಕಾರಿಯಾಗಿದ್ದು, ಸರ್ಕಾರದ ನೀತಿ ನಿಯಮಗಳನ್ನು ತಿಳಿದಿರಬೇಕಾಗಿದ್ದು, ನೀವು ಫಲಬಿಡುವ ಸುಮಾರು 10-15 ವರ್ಷವುಳ್ಳ ದೊಡ್ಡ ಮಾವಿನ ಮರವನ್ನು ಕಡಿಯಲು ಅರಣ್ಯ ಇಲಾಖೆಯವರ ಪೂರ್ವಾನುಮತಿಯನ್ನು ಪಡೆಯದೆ ಅಥವಾ ನಿಮ್ಮ ಮೇಲಾಧಿಕಾರಿಯವರ ಅನುಮತಿಯನ್ನು ಪಡೆಯದೆ ಮರವನ್ನು ಕಡಿದಿರುತ್ತೀರಿ. ನೀವು ಒಂದು ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾಗಿದ್ದು ಯಾರ ಅನುಮತಿಯನ್ನು ಪಡೆಯದೆ ನಿಮ್ಮ ಸ್ವಂತ ಇಷ್ಟವಾಗಿ ತುಂಡು ತುಂಡುಗಳಾಗಿ ಕಡಿದು ನಿಮ್ಮ ಕರ್ತವ್ಯದಲ್ಲಿ ಬೇಜವಾಬ್ದಾರಿತನವನ್ನು ತೋರಿರುತ್ತೀರಿ."

ಮೇಲ್ಕಂಡ ಆದೇಶ ಆರೋಪದ ಮೇಲೆ ಇಲಾಖಾ ವಿಚಾರಣಾಧಿಕಾರಿಗಳ ವರದಿಯಲ್ಲಿ ಆರೋಪಗಳು ಸಾಬೀತಾದ್ದರಿಂದ, ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಡಿಸಿಪಿ, ಸಿಎಆರ್ ಬೆಂಗಳೂರು ಇವರ ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 09.08.2002ರ ಆದೇಶದಲ್ಲಿ ಅರ್ಜಿದಾರರ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗುವಂತೆ ಮುಂದೂಡಿದ ಶಿಕ್ಷೆ ವಿಧಿಸಿ ಅಮಾನತ್ತಿನ ಅವಧಿ ದಿನಾಂಕ: 29.05.2001 ರಿಂದ 04.07.2001 ರವರೆಗಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿ, ಶಿಸ್ತು ಪ್ರಾಧಿಕಾರಿ ವಿಧಿಸಿರುವ ಶಿಕ್ಷೆಯನ್ನು ರದ್ದುಗೊಳಿಸಲು ಬೇಕಾದ ಸಕಾರಣಗಳನ್ನು ಹಾಗೂ ಆಧಾರಗಳನ್ನು ನೀಡಿಲ್ಲವೆಂದು ಪರಿಗಣಿಸಿ ಮೇಲ್ಮನವಿಯನ್ನು ಮೇಲೆ ಕ್ರ.ಸಂ. (2) ರಲ್ಲಿ ಓದಲಾದ ದಿನಾಂಕ: 31.12.2002ರ ಆದೇಶದಲ್ಲಿ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್ ಬೆಂಗಳೂರು ನಗರ ಇವರು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಪರಿಷ್ಕರಣಾ ಮೇಲ್ಮನವಿ ಸಲ್ಲಿಸಿರುತ್ತಾರೆ. ಅರ್ಜಿದಾರರ ವಾದಾಂಶಗಳನ್ನು, ಇಲಾಖಾ ವಿಚಾರಣೆ ದಾಖಲೆಗಳನ್ನು ಹಾಗೂ ಕಂಡಿಕಾವಾರು ಷರಾಗಳನ್ನು ಪರಿಶೀಲಿಸಿದ ನಂತರ, ಅರ್ಜಿದಾರರು 2008 ರಲ್ಲಿ ನಿವೃತ್ತಿ ಹೊಂದುತ್ತಿರುವುದರಿಂದ ಹಾಗೂ ಇವರು ಪೊಲೀಸ್ ಇಲಾಖೆಯಲ್ಲಿ ಉತ್ತಮ ಸೇವೆ ಸಲ್ಲಿಸಿ ಹಲವು ಪ್ರಶಸ್ತಿಗಳನ್ನು ಪಡೆದಿರುವ ಹಿನ್ನೆಲೆಯಲ್ಲಿ ಶಿಸ್ತು ಪ್ರಾಧಿಕಾರಿ ವಿಧಿಸಿರುವ ದಂಡನೆಯನ್ನು ರದ್ದುಪಡಿಸಿ ಅರ್ಜಿದಾರರನ್ನು ಸಂಪೂರ್ಣವಾಗಿ ದೋಷಮುಕ್ತರನ್ನಾಗಿ ಮಾಡಲು ಹಾಗೂ ಅಮಾನತ್ತಿನ ಅವಧಿಯನ್ನು ಕರ್ತವ್ಯವೆಂದು ಪರಿಗಣಿಸಿ ಎಲ್ಲಾ ಸವಲತ್ತುಗಳನ್ನು ನೀಡಲು ತೀರ್ಮಾನಿಸಿ ನಿಯಮಾನುಸಾರ ಕರ್ನಾಟಕ ಲೋಕಸೇವಾ ಆಯೋಗವು ಅಭಿಪ್ರಾಯ ಕೋರಲಾಗಿತ್ತು.

ಕರ್ನಾಟಕ ಲೋಕ ಸೇವಾ ಆಯೋಗವು ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ದಿನಾಂಕ: 22.03.2005ರ ತನ್ನ ಪತ್ರದಲ್ಲಿ ಅರ್ಜಿದಾರರನ್ನು ಸಂಪೂರ್ಣವಾಗಿ ದೋಷಮುಕ್ತಗೊಳಿಸುವ ಪ್ರಸ್ತಾವನೆಗೆ ಸಹಮತಿ ಇದೆಯೆಂದು ತಿಳಿಸಿದೆ. ಅದರಂತೆ ಸರ್ಕಾರವು ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 45 ಪೊಸಿಅ 2003, ಬೆಂಗಳೂರು, ದಿನಾಂಕ: 16ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965 ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಟಿ.ಎಸ್. ಶಂಕರ್, ಎಆರ್‌ಎಸ್‌ಐ, ಸಿಎಆರ್ (ಕೇಂದ್ರ) ಬೆಂಗಳೂರು ಇವರಿಗೆ ಶಿಸ್ತು ಪ್ರಾಧಿಕಾರಿ ವಿಧಿಸಿರುವ ಶಿಕ್ಷೆಯನ್ನು ರದ್ದುಪಡಿಸಿ ದೋಷಮುಕ್ತರನ್ನಾಗಿ ಆದೇಶಿಸಿದೆ.

ಈ ಆದೇಶವು ಶಿಸ್ತು ಪ್ರಾಧಿಕಾರಿಯು ಶಿಕ್ಷೆ ವಿಧಿಸಿ ಆದೇಶ ಹೊರಡಿಸಿದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಅರ್ಜಿದಾರರು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಕರ್ತವ್ಯವೆಂದು ಪರಿಗಣಿಸಿದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗವು ಪತ್ರ ಸಂಖ್ಯೆ: ಪಿಎಸ್‌ಸಿ:94:ಸಿಎನ್‌ಎಸ್ 2004, ದಿನಾಂಕ: 22.03.2005 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 583 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

## ಕಾನೂನು ಸಚಿವಾಲಯ

**ವಿಷಯ:** ಮೈಸೂರಿನ ಕುಟುಂಬ ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಲಾ 16 ಎಲ್‌ಎಸಿ 2003, ದಿನಾಂಕ: 16.4.2003.

2. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜಿಓಬಿ-2-408(16)2004, ದಿನಾಂಕ: 23.12.2004.

**ಪ್ರಸ್ತಾವನೆ:**

ಮೈಸೂರಿನ ಕುಟುಂಬ ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಸದರಿ ನ್ಯಾಯಾಲಯದ ಕಾರ್ಯಾವಧಿಯು ದಿನಾಂಕ: 31.3.2005ಕ್ಕೆ ಪೂರ್ಣಗೊಳ್ಳಲಿದೆ.

ಸದರಿ ನ್ಯಾಯಾಲಯಕ್ಕೆ ಮಂಜೂರಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಹುದ್ದೆಗಳನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (2)ರ ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 6 ಎಲ್‌ಎಸಿ 2005, ಬೆಂಗಳೂರು, ದಿನಾಂಕ: 18ನೇ ಜನವರಿ 2005**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಮೈಸೂರಿನ ಕುಟುಂಬ ನ್ಯಾಯಾಲಯದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

ಈ ನ್ಯಾಯಾಲಯದ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-117-0-00-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಪಿ.ಆರ್. 593 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1).

## HEALTH & FAMILY WELFARE SECRETARIAT

**Subject:** Conduct of Entrance Test for Admission to MD Ayurveda, MD Unani and MD Homoeopathy Courses in Government Quota in Private Colleges.

**Read:**
1. G.O.No. HFW 320 PTD 2004, dated: 30.04.2004.
2. Letter No. ISM/5/DEV(1) 2004-05, dated: 27.01.2005 of the Director of Indian System of Medicine and Homoeopathy.
3. Letter No. ಭಾವೈಪ 39 ನಿಆವಿ 2004-2005, dated: 14.03.2005 of the Director of Indian System of Medicine and Homoeopathy.

**PREAMBLE:**

1. Promulgation of Karnataka Selection of Candidates for Admission to M.Sc., Nursing, M.Pharm and MPT, MD Ayurveda, MD Unani and MD Homoeopathy Courses Rules, 2005 is under consideration of Government. The seat sharing ratio as proposed is all the seats in Government Colleges and such percentage of seats as may be determined by Government from time to time in Private Colleges. The admission will be strictly on the basis of an Entrance Test in terms of the ruling contained in the judgement in State of Madhya Pradesh-V/s-Gopal D. Tirthani (2003 AIR SCW 3636). Since there is some delay in the enactment of the proposed rules it is considered necessary to issue orders for conduct of Entrance Test for Admission to MD Ayurveda, MD Unani and MD Homoeopathy Courses in the academic year 2005-2006 and the seat sharing ratio of the said PG Courses in Private Colleges and also the fee structure chargeable from the candidates seeking admissions.

2. Conduct of Entrance Test and taking over 50% of the seats in PG Courses offered in Private Ayurveda, Unani and Homoeopathy Colleges have been considered in consultation with Director of Indian System of Medicine and Homeopathy. The Karnataka Ayurveda Doctors Association has requested to apportion 50% of the intake of PG Courses in Private Ayurveda, Unani and Homoeopathy Colleges as Government seats so as to enable them to pursue their studies in PG Courses. In the meantime, the Karnataka State Private Ayurvedic Medical College and Hospital Associations Federation have submitted a memorandum to the Government with a request to permit them to admit the candidates to all seats in PG Courses by the managements as in 2004-2005. During the academic year 2004-2005 many UG seats in Government and Private Ayurvedic Colleges were vacant and it would be unviable for the Private Colleges to run the colleges if seats within the sanctioned intake are vacant. Further they have submitted that in case of Under Graduate Courses 70% of the seats are management seats in un-aided colleges and 20% of the seats in case of aided Colleges. Hence, such colleges find it difficult to run the colleges if 50% of the PG seats are apportioned as Government seats. They have sought exemption for the academic year 2005-06 so as to enable them to strengthen and upgrade their colleges, which are just emerging.

3. Government has considered all the aspects from various perspective. It is imperative that Government is required to provide Post-Graduation to such of the merited candidates not only in the Government colleges but also in the private Colleges taking over certain percentage of seats as Government seats under Government quota. Simultaneously, the interest of the managements will have to be kept in view while determining the seat sharing ratio. Even the distribution of seats in the Nursing, Pharmacy and Physiotherapy UG Courses conducted in the Private Nursing, Pharmacy and Physiotherapy Colleges is at 30:70 between the Government and the Managements It is considered very much feasible to apportion the PG seats in Ayurvedic, Unani and Homoeopathy Colleges in the ratio of 25:75 between Government and the Management applicable for the academic session 2005-2006 only.

**GOVERNMENT ORDER No. HFW 88 MPS 2005(I), Bangalore, Dated: 8th April 2005**

4. Pending publication of Karnataka Selection of Candidates for Admission to M.Sc., Nursing, M.Pharm and MPT, MD Ayurveda, MD Unani and MD Homoeopathy Courses Rules, 2005 Government of Karnataka hereby directs for conduct of Entrance Test for Admission to MD Ayurveda, MD Unani and MD Homoeopathy Courses in the academic year 2005-2006 for Admission to the extent of 25% of the intake in each Post Graduate Course in Private Ayurvedic, Unani and Homoeopathy Colleges and for all seats in Government Ayurvedic, Unani and Homoeopathy colleges during the academic year 2005-2006.

5. Rajiv Gandhi University of Health Sciences shall conduct the Entrance Test for Admission to the said MD Ayurveda, MD Unani and MD Homoeopathy Courses.

6. 25% of the seats in each MD Ayurveda, MD Unani and MD Homoeopathy offered in the private Ayurvedic, Unani and Homoeopathy colleges respectively shall be Government seats under Government quota the admission for which shall be through counseling conducted by the Rajiv Gandhi University of Health Sciences on the basis of merit-cum-reservation.

7. The fee structure chargeable from the candidates seeking admission to the above Post-Graduate PG Courses shall be notified separately.

By Order and in the Name of the Governor of Karnataka,

**G. CHOMA NAIK**

P.R. 576

Under Secretary to Government,
Health & Family Welfare Department.

## ಕಾನೂನು ಸಚಿವಾಲಯ

**ವಿಷಯ:** ಶ್ರೀ ವಿನಾಯಕ ನಾರಾಯಣ ಶೆಣ್ವಿ, ನೋಟರಿ, ದಾಂಡೇಲಿ ಇವರ ರಾಜೀನಾಮೆ ಅಂಗೀಕರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಲಾ 183 ಎಲ್‌ಸಿಎಲ್ 1993, ದಿನಾಂಕ: 28.10.1993.

2. ನೋಟರಿಯವರ ಮನವಿ ದಿನಾಂಕ: 02.6.2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1) ದಿನಾಂಕ: 28.10.93ರ ಸರ್ಕಾರಿ ಆದೇಶದಲ್ಲಿ ಶ್ರೀ ವಿನಾಯಕ ನಾರಾಯಣ ಶೆಣ್ವಿ, ವಕೀಲರು, ದಾಂಡೇಲಿ ಇವರನ್ನು ದಾಂಡೇಲಿ ಕಂದಾಯ ತಾಲ್ಲೂಕಿನ ನೋಟರಿಯಾಗಿ ನೇಮಕ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (2)ರ ದಿನಾಂಕ: 02.06.2004ರ ಮನವಿ ಪತ್ರದಲ್ಲಿ ಶ್ರೀ ವಿನಾಯಕ ನಾರಾಯಣ ಶೆಣ್ವಿ, ಇವರು 2 ಶಸ್ತ್ರ ಚಿಕಿತ್ಸೆಗೆ ಒಳಗಾಗಿದ್ದು ಅನಾರೋಗ್ಯ ಪೀಡಿತರಾಗಿದ್ದು ವೈದ್ಯರ ಆದೇಶದ ಮೇರೆಗೆ ತಾವು ನೋಟರಿ ಹುದ್ದೆಗೆ ರಾಜೀನಾಮೆ ಸಲ್ಲಿಸಿರುವುದಾಗಿ ತಿಳಿಸಿ ಅದನ್ನು ಅಂಗೀಕರಿಸಲು ಕೋರಿರುತ್ತಾರೆ. ಆದ್ದರಿಂದ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 10 ಎಲ್‌ಸಿಎಲ್ 2005, ಬೆಂಗಳೂರು, ದಿನಾಂಕ: 31ನೇ ಮಾರ್ಚ್ 2005**

ಶ್ರೀ ವಿನಾಯಕ ನಾರಾಯಣ ಶೆಣ್ವಿ, ನೋಟರಿ, ದಾಂಡೇಲಿ ಇವರು ನೋಟರಿ ಹುದ್ದೆಗೆ ಸಲ್ಲಿಸಿರುವ ರಾಜೀನಾಮೆಯನ್ನು ದಿನಾಂಕ: 02.06.2004 ರಿಂದ ಜಾರಿಗೆ ಬರುವಂತೆ ಅಂಗೀಕರಿಸಲಾಗಿದೆ ಮತ್ತು ಸದರಿಯವರ ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ತೆಗೆದು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎ. ಬಾಬುರವೀಂದ್ರನಾಥ್ ಪಟೇಲ್**

ಪಿ.ಆರ್. 592

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ), ಕಾನೂನು ಇಲಾಖೆ (ಆಡಳಿತ-2).

## ಒಳಾಡಳಿತ ಸಚಿವಾಲಯ

**ವಿಷಯ:** ಮೈಸೂರು ನಗರದಲ್ಲಿರುವ ಗಣಪತಿ ಸಚ್ಚಿದಾನಂದ ಆಶ್ರಮದ ಆವರಣದಲ್ಲಿ ಒಂದು ಪೊಲೀಸ್ ಹೊರ ಠಾಣೆ ತೆರೆಯುವ ಬಗ್ಗೆ.

**ಓದಲಾಗಿದೆ:** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂಖ್ಯೆ: ಆರ್‌ಎಲ್‌ಎನ್(5)9/2003-04, ದಿನಾಂಕ: 03.11.2003.

**ಪ್ರಸ್ತಾವನೆ:**

ಓದಲಾದ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ದಿನಾಂಕ: 03.11.2003ರ ಪತ್ರದಲ್ಲಿ ಮೈಸೂರು ನಗರದ ವಿದ್ಯಾರಣ್ಯಪುರಂ ಪೊಲೀಸ್ ಠಾಣೆಯ ವ್ಯಾಪ್ತಿಯಲ್ಲಿ ಬೆಂಗಳೂರು ನೀಲಗಿರಿ ರಸ್ತೆಯ ಪಶ್ಚಿಮ ಭಾಗದಲ್ಲಿ ಗಣಪತಿ ಸಚ್ಚಿದಾನಂದ ಆಶ್ರಮಕ್ಕೆ ರಾಷ್ಟ್ರದ ವಿವಿಧ ಕಡೆಗಳಿಂದ ಭಕ್ತರು ಗಣ್ಯ ಹಾಗೂ ಅತಿಗಣ್ಯ ವ್ಯಕ್ತಿಗಳಲ್ಲದೇ ವಿದೇಶೀಯರೂ ಸಹ ಹೆಚ್ಚಿನ ಸಂಖ್ಯೆಯಲ್ಲಿ ಪ್ರತಿದಿನ ಭೇಟಿ ನೀಡುತ್ತಾರೆ. ಸದರಿ ಆಶ್ರಮದ ಆವರಣವು ಬಹಳ ವಿಶಾಲವಾಗಿದ್ದು, ಅಮೂಲ್ಯ ಆಸ್ತಿಪಾಸ್ತಿಗಳಿರುತ್ತವೆ. ಸದರಿ ಆಶ್ರಮದಲ್ಲಿ ಪ್ರತಿ ದಿನವೂ ಕಾರ್ಯಕ್ರಮಗಳಿದ್ದು, ಅತಿ ಹೆಚ್ಚಿನ ಸಂಖ್ಯೆಯಲ್ಲಿ ಭಕ್ತಾಧಿಗಳು ಭಾಗವಹಿಸುತ್ತಿದ್ದು, ವಿದ್ಯಾರಣ್ಯಪುರಂ ಪೊಲೀಸ್ ಠಾಣೆಯ ಸಿಬ್ಬಂದಿಯವರನ್ನು ಸದಾಕಾಲವೂ ಅಲ್ಲಿಗೆ ನಿಯೋಜಿಸಲು ಕಷ್ಟವಾಗಿರುತ್ತದೆ.

2. ಗಣಪತಿ ಸಚ್ಚಿದಾನಂದ ಆಶ್ರಮವು ಮೈಸೂರು ನೀಲಗಿರಿ ರಸ್ತೆಯಲ್ಲಿ ಇರುವುದರಿಂದ ವಾಹನಗಳ ಓಡಾಟವು ಜಾಸ್ತಿಯಿದ್ದು, ಆಶ್ರಮಕ್ಕೆ ಬರುವ ಭಕ್ತಾಧಿಗಳೂ ಸಹ ವಾಹನಗಳಲ್ಲಿ ಬರುವುದರಿಂದ ಸಂಚಾರ ವ್ಯವಸ್ಥೆಗೆ ತೊಂದರೆಯಾಗುತ್ತಿದೆ. ಹೊರ ಠಾಣೆಯನ್ನು ತೆರೆಯುವುದರಿಂದ ಸಂಚಾರ ನಿಯಂತ್ರಣವನ್ನು ಸಹ ನಿಯಂತ್ರಿಸಬಹುದಾಗಿದ್ದು, ಹೊರ ಠಾಣೆಯನ್ನು ಆಶ್ರಮದ ಹೊರ ಭಾಗದಲ್ಲಿ ಪ್ರತ್ಯೇಕವಾದ ಜಾಗ ಪಡೆದು ಪ್ರಾರಂಭಿಸಿ ನಂತರ ಖಾಯಂ ಕಟ್ಟಡವನ್ನು ನಿರ್ಮಿಸಬಹುದಾಗಿರುತ್ತದೆ.

3. ಮೇಲೆ ತಿಳಿಸಿರುವ ಕಾರಣಗಳಿಂದ ಗಣಪತಿ ಸಚ್ಚಿದಾನಂದ ಆಶ್ರಮದಲ್ಲಿ ಒಂದು ಹೊರ ಠಾಣೆಯನ್ನು ತೆರೆಯುವುದು ಅವಶ್ಯಕವಿದ್ದು, ಕೆಳಕಂಡಂತೆ ನೀಡಿರುವ ಸಿಬ್ಬಂದಿಯನ್ನು ನಿಯೋಜಿಸಲು ಕೋರಿ 2003-04ನೇ ಸಾಲಿನ ತಪಾಸಣಾ ಪಟ್ಟಿಯಲ್ಲಿ ವೆಚ್ಚದ ವಿವರಗಳನ್ನು ಒದಗಿಸಿ ಪ್ರಸ್ತಾಪಿತ ಹೊರ ಠಾಣೆಯನ್ನು ವಿದ್ಯಾರಣ್ಯಪುರಂ ಪೊಲೀಸ್ ಠಾಣೆಗೆ ಸೇರಿಸಬಹುದು ಎಂದು ತಿಳಿಸಿದ್ದರು.

| **ಸಿಬ್ಬಂದಿಯವರ ವಿವರ:** | | |
|---|---|---|
| 1. | ಎ.ಎಸ್.ಐ. | 01 ಹುದ್ದೆ |
| 2. | ಸಿವಿಲ್ ಮುಖ್ಯ ಪೇದೆ | 02 ಹುದ್ದೆಗಳು |
| 3. | ಪೇದೆಗಳು | 06 ಹುದ್ದೆಗಳು |
| 4. | ಮಹಿಳಾ ಪೇದೆಗಳು | 02 ಹುದ್ದೆಗಳು |

| ವೆಚ್ಚ: | | |
|---|---|---|
| | ಆವರ್ತಕ ವೆಚ್ಚ | ರೂ. 9,68,808/- |
| | ಅನಾವರ್ತಕ ವೆಚ್ಚ | ರೂ. 40,000/- |
| | ಒಟ್ಟು | ರೂ.10,08,808/- |

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 212 ಪಿಓಪಿ 2003, ಬೆಂಗಳೂರು, ದಿನಾಂಕ: 31ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 161 ಪೊಸಇ 2004 ದಿನಾಂಕ: 15.10.2004ರ ರೀತ್ಯಾ ಎ.ಎಸ್.ಐ.-01 ಹುದ್ದೆ, ಸಿವಿಲ್ ಮುಖ್ಯ ಪೇದೆ-02 ಹುದ್ದೆ, ಪೇದೆಗಳು-06 ಹುದ್ದೆ, ಮಹಿಳಾ ಪೇದೆಗಳು-02 ಹುದ್ದೆಗಳಂತೆ 11 ಹುದ್ದೆಗಳ ಸೃಜನೆಗೆ ಹಾಗೂ ಮೈಸೂರು ನಗರದಲ್ಲಿರುವ ಗಣಪತಿ ಸಚ್ಚಿದಾನಂದ ಆಶ್ರಮದ ಆವರಣದಲ್ಲಿ ಒಂದು ಪೊಲೀಸ್ ಹೊರ ಠಾಣೆಯನ್ನು ತೆರೆಯಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

ಈ ಹುದ್ದೆಗಳಿಗೆ ತಗಲುವ ವೆಚ್ಚ ರೂ.10.08 ಲಕ್ಷಗಳನ್ನು 2004-05ನೇ ಸಾಲಿನ ಲೆಕ್ಕ ಶೀರ್ಷಿಕೆ 2055-ಪೊಲೀಸ್-ಇದರ ಅಡಿಯಲ್ಲಿ ಒದಗಿಸಲಾದ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1595 ವೆಚ್ಚ-6/2004 ದಿನಾಂಕ: 23.3.2005ರ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಎಸ್. ರಾಜು
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ).

ಪಿ.ಆರ್. 594

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** 2004-2005ನೇ ಸಾಲಿನ ಎಸ್‌ಜಿಎಸ್‌ವೈ ಎರಡನೇ ಕಂತಿನ ಹಣವನ್ನು ಚಿಕ್ಕಮಗಳೂರು ಮತ್ತು ಕೊಡಗು ಜಿಲ್ಲಾ ಪಂಚಾಯತ್‌ಗಳಿಗೆ ಬಿಡುಗಡೆ ಮಾಡುವ (ಶೇ.25 ರಷ್ಟು ಹಂಚಿಕೆ) ಬಗ್ಗೆ.

**ಓದಲಾಗಿದೆ:**
1. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ 17013:10:2004 ಎಸ್‌ಜಿಎಸ್‌ವೈ-1(13) ದಿನಾಂಕ 22.04.2004 ಮತ್ತು (58) ದಿನಾಂಕ: 16.11.2004, (80) ದಿನಾಂಕ: 16.12.2004, (115) ದಿನಾಂಕ: 06.01.2005, (131) ದಿನಾಂಕ: 25.01.2005, (156) ದಿನಾಂಕ: 17.02.2005 (166) ದಿನಾಂಕ: 01.03.2005, (178) ದಿನಾಂಕ: 14.03.2005, (179) ದಿನಾಂಕ: 14.03.2005 ಮತ್ತು (199) ದಿನಾಂಕ: 24.03.2005
2. ಸಂಖ್ಯೆ: ಆಇ 1091 ವೆಚ್ಚ 6:2004 ದಿನಾಂಕ: 23.08.2004.
3. ಸರ್ಕಾರದ ಆದೇಶದ ಸಮಸಂಖ್ಯೆ ದಿನಾಂಕ: 17.09.2004, 29.12.2004, 10.01.2005, 27.01.2005, 04.03.2005, 05.03.2005, 18.03.2005, 22.03.2005 ಮತ್ತು ದಿನಾಂಕ: 29.03.2005.
4. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ: 17013:10:2004 ಎಸ್.ಜಿ.ಎಸ್.ವೈ-1(204) ದಿನಾಂಕ: 30.03.2005.

**ಪ್ರಸ್ತಾವನೆ:**

ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಉಲ್ಲೇಖಿತ ಪತ್ರ (1) ಮತ್ತು (3) ರಲ್ಲಿ ರಾಜ್ಯದ ಎಲ್ಲಾ ಜಿಲ್ಲೆಗಳಿಗೆ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್.ಜಿ.ಎಸ್.ವೈ) ಒಂದನೇ ಕಂತಿನ ಹಣ ರೂ.20,03,38,000 ಮತ್ತು ರೂ.6,67,79,000 ಗಳನ್ನು ಅನುಕ್ರಮವಾಗಿ ಬಿಡುಗಡೆ ಮಾಡಿವೆ. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು 25 ಜಿಲ್ಲೆಗಳಿಗೆ ಎರಡನೇ ಕಂತಿನ ಕೇಂದ್ರ ಪಾಲಿನ ಹಣ ರೂ.16,79,69,000 ಮತ್ತು 5,59,91,000 ಬೆಳಗಾಂ ಮತ್ತು ಹಾವೇರಿ ಜಿಲ್ಲಾ ಪಂಚಾಯತ್‌ಗಳಿಗೆ ಕಡಿತಗೊಳಿಸಿದ್ದ ಎರಡನೇ ಕಂತಿನ ಹಣವನ್ನು ಪೂರ್ವ ಸ್ಥಿತಿಗೆ ತಂದು ಕೇಂದ್ರದ ಪಾಲಿನ ಹಣ ರೂ.43,70,000 ಗಳನ್ನು ಹಾಗೂ ರಾಜ್ಯದ ಪಾಲಿನ ಹಣ ರೂ.14,57,000 ಗಳನ್ನು ಬಿಡುಗಡೆ ಮಾಡಿವೆ. (ಓದಲಾದ ಕ್ರಮ ಸಂಖ್ಯೆ (1) ಮತ್ತು (3) ರಂತೆ) ಈಗ ಕೇಂದ್ರ ಸರ್ಕಾರ ಓದಲಾದ ಕ್ರಮ ಸಂಖ್ಯೆ (4) ರಂತೆ ರೂ.8,26,000 ಗಳನ್ನು ಚಿಕ್ಕಮಗಳೂರು ಮತ್ತು ಕೊಡಗು ಜಿಲ್ಲೆಗಳಿಗೆ ಎರಡನೇ ಕಂತಿನ ಹಣವನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯದ ಪಾಲಿನ ಹಣ ರೂ.2,75,000 ಗಳನ್ನು ಸದರಿ ಜಿಲ್ಲಾ ಪಂಚಾಯತ್‌ಗಳಿಗೆ ಬಿಡುಗಡೆ ಮಾಡಬೇಕಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 18 ಸ್ವಜಯೋ 2004, ಬೆಂಗಳೂರು, ದಿನಾಂಕ: 31ನೇ ಮಾರ್ಚ್ 2005**

ರಾಜ್ಯ ಸರ್ಕಾರವು ಚಿಕ್ಕಮಗಳೂರು ಮತ್ತು ಕೊಡುಗು ಜಿಲ್ಲಾ ಪಂಚಾಯತ್‌ಗಳಿಗೆ ಎರಡನೇ ಕಂತಿನ ಹಣ ರೂ.2,75,000-00 ಗಳನ್ನು (ರೂ.ಎರಡು ಲಕ್ಷದ ಎಪ್ಪತ್ತೈದು ಸಾವಿರ ಮಾತ್ರ) ಕೆಳಕಂಡ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

| ಕ್ರ. ಸಂ. | ಜಿ.ಪಂ. ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | ಕೇಂದ್ರ ಸರ್ಕಾರದಿಂದ ಬಿಡುಗಡೆಯಾದ 2ನೇ ಕಂತು | ರಾಜ್ಯ ಸರ್ಕಾರ ಬಿಡುಗಡೆ ಮಾಡುತ್ತಿರುವ 2ನೇ ಕಂತು |
|---|---|---|---|---|---|
| 1 | ಚಿಕ್ಕಮಗಳೂರು | 408 | 1800ZZ0017 | 6,91,000 | 2,30,000 |
| 2 | ಕೊಡಗು | 411 | 1200ZZ0001 | 1,35,000 | 45,000 |
| | **ಮೊತ್ತ** | | | **8,26,000** | **2,75,000** |

1999ನೇ ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ನಿಧಿಯ ಮಾದರಿ ಕೇಂದ್ರ ಮತ್ತು ರಾಜ್ಯಗಳ ನಡುವೆ 75:25ರ ಅನುಪಾತದಲ್ಲಿ ನೀಡಲಾಗುವುದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ 2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು-196-ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ-1-ಜಿಲ್ಲಾ ಪಂಚಾಯತ್‌ಗಳು-07-ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ-ಯೋಜನೆ 2004-2005 (2501-01-196-1-07) ರಡಿ ಭರಿಸತಕ್ಕದ್ದು.

ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು ಮತ್ತು ಕೊಡುಗು ಜಿಲ್ಲೆ ಇವರು ಹಣ ತೆಗೆಯಲು ಕಾನೂನು ರೀತ್ಯಾ ಅಧಿಕಾರ ನೀಡಲಾಗಿದೆ.

2004-2005ನೇ ಸಾಲಿನ ಅನುಮೋದಿತ ವಾರ್ಷಿಕ ಕ್ರಿಯಾ ಯೋಜನೆಯನ್ನು ಸಂಬಂಧಿಸಿದ ಉಪ ಕಾರ್ಯದರ್ಶಿ (ಅಭಿವೃದ್ಧಿ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು ಮತ್ತು ಕೊಡಗು ಇವರುಗಳು ಆರ್ಥಿಕ ಮತ್ತು ಭೌತಿಕ ಸಾಧನೆಯ ಆಯಾ ಮಾಹೆಯ ಪ್ರಗತಿ ವರದಿಯನ್ನು ಮುಂದಿನ ತಿಂಗಳ 10ನೇ ತಾರೀಖಿನೊಳಗೆ ನಿರ್ದೇಶಕರು (ಸ್ವಉಕಾ), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು ಮತ್ತು ಕೊಡಗು ಜಿಲ್ಲೆ ಇವರು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ ... ಪಿಬಿಎಸ್ 05 ದಿನಾಂಕ: 31.03.2005 ಹಾಗೂ ಪತ್ರ ಸ್ವೀಕೃತಿ ಮತ್ತು ರವಾನೆ ಶಾಖೆಯ ಯೂನಿಕ್ ನಂ.44/05 ದಿನಾಂಕ: 31.03.2005 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಬಿ. ಹಿರೇಮಣಿಯವರ್**
ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.-

ಪಿ.ಆರ್. 570

**ವಿಷಯ:** 2004-2005ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಶೀರ್ಷಿಕೆಯಡಿ ಡಿಆರ್‌ಡಿಎ ಕಛೇರಿ ಕಟ್ಟಡ ನಿರ್ಮಿಸಲು ರಾಜ್ಯದ ಪಾಲಿನ ಎರಡನೇ ಕಂತಿನ ಹಣವನ್ನು ಗುಲ್ಬರ್ಗಾ ಜಿಲ್ಲಾ ಪಂಚಾಯತ್‌ಗೆ ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ:**
1. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ: ಆರ್ 20015-65-2002-ಎಸ್‌ಜಿಎಸ್‌ವೈ-1(ಡಿಅಡ್‌ಮಿನ್) (ಎಸ್‌ಆರ್ ನಂ.206) ದಿನಾಂಕ: 22.04.2004.
2. ಸರ್ಕಾರದ ಆದೇಶದ ಸಂಖ್ಯೆ: ಗ್ರಾಅಪ 5 ಸ್ವಜಯೋ:ಡಿಆರ್‌ಡಿಎ 2003, ಬೆಂಗಳೂರು ದಿನಾಂಕ: 30.3.2004.
3. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ: ಆರ್:20015:65:2002 ಡಿಆರ್‌ಡಿಎ (ಎಸ್ ನಂ.15) ದಿನಾಂಕ: 22.03.2005.

**ಪ್ರಸ್ತಾವನೆ:**

ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಉಲ್ಲೇಖ (1) ಮತ್ತು (2) ರಲ್ಲಿ ರಾಜ್ಯದ ಬೀದರ್, ದಾವಣಗೆರೆ, ಗದಗ್, ಗುಲ್ಬರ್ಗಾ, ಕೋಲಾರ, ರಾಯಚೂರು ಮತ್ತು ಉತ್ತರ ಕನ್ನಡ (ಏಳು ಜಿಲ್ಲಾ ಪಂಚಾಯತ್‌ಗಳು) ಜಿಲ್ಲೆಗಳಿಗೆ ಡಿಆರ್‌ಡಿಎ ಕಟ್ಟಡ ಕಟ್ಟಲು ಕ್ರಮವಾಗಿ ರೂ.61,87,000 ಹಾಗೂ ರೂ.20,62,000 ಗಳನ್ನು ಒಂದನೇ ಕಂತಿನ ಅನುದಾನವನ್ನಾಗಿ ಬಿಡುಗಡೆ ಮಾಡಿದ್ದವು. ಉಲ್ಲೇಖ (3)ರ ಆದೇಶದಲ್ಲಿ ಕೇಂದ್ರ ಸರ್ಕಾರವು ಗುಲ್ಬರ್ಗಾ ಜಿಲ್ಲಾ ಪಂಚಾಯತ್‌ಗೆ ಡಿಆರ್‌ಡಿಎ ಕಟ್ಟಡ ಕಟ್ಟಲು ಒಟ್ಟು ರೂ.24,00,000 ಗಳನ್ನು ಮಂಜೂರು ಮಾಡಿದ್ದು ಈ ಪೈಕಿ ಎರಡನೇ ಕಂತಿನ ಹಣ ರೂ.9,00,000 ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯವು ಎರಡನೇ ಕಂತಿನ ಹಣ ರೂ.3,00,000 ಗಳನ್ನು ಗುಲ್ಬರ್ಗಾ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಬೇಕಾಗಿದೆ. ಅದಕ್ಕಾಗಿ ಈ ಆದೇಶ:

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 5 ಸ್ವಜಯೋ (ಡಿಆರ್‌ಡಿಎ) 2003, ಬೆಂಗಳೂರು, ದಿನಾಂಕ: 31ನೇ ಮಾರ್ಚ್ 2005**

ರಾಜ್ಯ ಸರ್ಕಾರವು ಗುಲ್ಬರ್ಗಾ ಜಿಲ್ಲಾ ಪಂಚಾಯತಿಗೆ ಡಿಆರ್‌ಡಿಎ ಕಟ್ಟಡ ಕಟ್ಟುವ ಸಲುವಾಗಿ ರೂ.3,00,000 (ರೂ. ಮೂರು ಲಕ್ಷ ಮಾತ್ರ) ಗಳನ್ನು ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರ. ಸಂ. | ಜಿಲ್ಲಾ ಪಂಚಾಯತ್ ಹೆಸರು | ಕೇಂದ್ರ ಸರ್ಕಾರದಿಂದ ಮಂಜೂರಾದ ಒಟ್ಟು ಅನುದಾನ | ಕೇಂದ್ರದ ಪಾಲಿನ ಒಟ್ಟು ಅನುದಾನ | ಕೇಂದ್ರದ ಪಾಲಿನ 2ನೇ ಕಂತಿನ ಅನುದಾನ ಬಿಡುಗಡೆ ಮಾಡಿರುವುದು | ರಾಜ್ಯ ಸರ್ಕಾರ ಬಿಡುಗಡೆ ಮಾಡುತ್ತಿರುವ 2ನೇ ಕಂತಿನ ಅನುದಾನ |
|---|---|---|---|---|---|
| 1 | ಗುಲ್ಬರ್ಗಾ | 24,00,000 | 18,00,000 | 9,00,000 | 3,00,000 |

**ಷರತ್ತುಗಳು:**

1. ಕಛೇರಿ ಕಟ್ಟಡ ಕಟ್ಟಲು ನೀಡಿರುವ ಹಣವನ್ನು ಇದಕ್ಕಾಗಿಯೇ ವಿನಿಯೋಗಿಸುವುದು ಬೇರೆ ಇನ್ನಾವುದೇ ಉದ್ದೇಶಕ್ಕಾಗಿ ಉಪಯೋಗಿಸತಕ್ಕದ್ದಲ್ಲ.
2. ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯಗಳ ನಡುವೆ 75:25ರ ಅನುಪಾತದಲ್ಲಿರುತ್ತದೆ.
3. ಈ ವೆಚ್ಚವನ್ನು ಡಿಆರ್‌ಡಿಎ ಆಡಳಿತ ಯೋಜನೆಯ ಲೆಕ್ಕಶೀರ್ಷಿಕೆಯಿಂದ ಭರಿಸತಕ್ಕದ್ದು. ಪ್ರಧಾನ ಲೆಕ್ಕಶೀರ್ಷಿಕೆ 2515-ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00-196-ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ-1-ಜಿಲ್ಲಾ ಪಂಚಾಯತ್‌ಗಳು-06-ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ-ಜಿಲ್ಲಾ ಪಂಚಾಯತ್‌ಗಳಿಗೆ ಅನುದಾನ 2004-2005 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು (2515-00-196-1-06)
4. ಬಿಡುಗಡೆ ಮಾಡುವ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.
5. ಜಿಲ್ಲಾಪಂಚಾಯತ್‌ಗಳು ಕಛೇರಿ ಕಟ್ಟಡವನ್ನು ನಿಖರ ಕಾಲಾವಧಿಯಲ್ಲಿ ಪೂರ್ಣಗೊಳಿಸಿ ಸರ್ಕಾರಕ್ಕೆ ತಿಳಿಸುವುದು.

6. ಮುಖ್ಯ ಲೆಕ್ಕಾಧಿಕಾರಿಗಳು, ಗುಲ್ಬರ್ಗಾ ಜಿಲ್ಲಾ ಪಂಚಾಯತ್‌ರವರಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ 103 ಪಿಬಿಎಸ್ 2005 ದಿನಾಂಕ: 31.03.2005 ಹಾಗೂ ಪತ್ರ ಸ್ವೀಕೃತಿ ಮತ್ತು ರವಾನೆ ಶಾಖೆಯ ಯೂನಿಕ್ ನಂ.45/05 ದಿನಾಂಕ: 31.03.2005 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಬಿ. ಹಿರೇಮಣಿಯವರ್**

ಪಿ.ಆರ್. 573

ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಶ್ರೀ ಎಂ.ಬಿ. ವೆಂಕಟರೆಡ್ಡಿ, ನಿವೃತ್ತ ಮುಖ್ಯ ಇಂಜಿನಿಯರ್ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 113 ಎಸ್‌ಇಎನ್ 2003, ಬೆಂಗಳೂರು, ದಿನಾಂಕ: 26ನೇ ಏಪ್ರಿಲ್ 2005**

ಶ್ರೀ ಎಂ.ಬಿ. ವೆಂಕಟರೆಡ್ಡಿ, ನಿವೃತ್ತ ಮುಖ್ಯ ಇಂಜಿನಿಯರ್ ಅವರ ಬಡ್ತಿ ವಿಷಯದಲ್ಲಿ ಸರ್ಕಾರದ ಉಪ ಕಾರ್ಯದರ್ಶಿ, ಸಿಆಸುಇ (ಸೇವೆಗಳು) ಇವರಿಗೆ ಹಣದ ಆಮಿಷವನ್ನು ತೋರಿಸಲು ಪ್ರಯತ್ನಿಸಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ರ ನಿಯಮ 3ನ್ನು ಉಲ್ಲಂಘಿಸಿ ದುರ್ನಡತೆ ಎಸಗಿರುವುದು ಕಂಡು ಬಂದಿರುವುದರಿಂದಲೂ,

ಮೇಲ್ಕಂಡ ದುರ್ನಡತೆಗಾಗಿ ಶ್ರೀ ಎಂ.ಬಿ. ವೆಂಕಟರೆಡ್ಡಿ, ನಿವೃತ್ತ ಮುಖ್ಯ ಇಂಜಿನಿಯರ್ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸಬೇಕೆಂದು ಸರ್ಕಾರವು ಭಾವಿಸಿರುವುದರಿಂದಲೂ,

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 214ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಂ.ಬಿ. ವೆಂಕಟರೆಡ್ಡಿರವರ ವಿರುದ್ಧ ಮೇಲೆ ಹೇಳಿದ ದುರ್ನಡತೆ ಕುರಿತು ಇಲಾಖಾ ವಿಚಾರಣೆ ನಡೆಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ವಿಚಾರಣೆಯಲ್ಲಿ ಸರ್ಕಾರವು ಶಿಸ್ತು ಪ್ರಾಧಿಕಾರಿಯಾಗಿ ಕಾರ್ಯ ನಿರ್ವಹಿಸತಕ್ಕದ್ದು ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11, 11-ಎ ರಲ್ಲಿ ನಿಗದಿಪಡಿಸಿರುವ ಕಾರ್ಯ ವಿಧಾನವನ್ನು ಅನುಸರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 597

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

### ತಿದ್ದೋಲೆ

**ಸಂಖ್ಯೆ: ಸಿಆಸುಇ 6 ಸಆಸೇ 2005, ಬೆಂಗಳೂರು, ದಿನಾಂಕ: 16ನೇ ಏಪ್ರಿಲ್ 2005**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 6 ಸಆಸೇ 2005, ದಿನಾಂಕ: 23.3.2005ರ ಒಂದನೇ ಸಾಲಿನಲ್ಲಿ ಬರುವ "ಉಪಕುಲ ಸಚಿವರು" ಎಂಬ ಪದದ ನಂತರ "ಸ್ವತಂತ್ರ ಪ್ರಭಾರ" ಎಂದು ಸೇರಿಸಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 598

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

## ಶಿಕ್ಷಣ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಇಡಿ 329 ಯುಆರ್‌ಸಿ 2004 (ಭಾಗ-2), ಬೆಂಗಳೂರು, ದಿನಾಂಕ: 16ನೇ ಏಪ್ರಿಲ್ 2005**

ದಿನಾಂಕ: 28.03.2005 ಸಂಖ್ಯೆ: ಇಡಿ 329 ಯುಆರ್‌ಸಿ 2004 (ಭಾಗ-2)ರ ಸರ್ಕಾರಿ ಆದೇಶದಲ್ಲಿ ಎಲ್ಲೆಲ್ಲಿ **2005-06ನೇ ಶೈಕ್ಷಣಿಕ ಸಾಲಿಗೆ** ಎಂದು ನಮೂದಿಸಲಾಗಿದೆಯೋ ಅದರ ಬದಲಾಗಿ **2004-05ನೇ ಶೈಕ್ಷಣಿಕ ಸಾಲಿಗೆ** ಎಂದು ತಿದ್ದಿಕೊಂಡು ಓದತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಂದರ ರಾಜ ಗುಪ್ತ**

ಪಿ.ಆರ್. 599

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ).

## ಒಳಾಡಳಿತ ಸಚಿವಾಲಯ

### ತಿದ್ದೋಲೆ

**ಸಂಖ್ಯೆ: ಒಇ 79 ಪಿಪಿಇ 2005, ಬೆಂಗಳೂರು, ದಿನಾಂಕ: 25ನೇ ಏಪ್ರಿಲ್ 2005**

ದಿನಾಂಕ: 17.03.2005ರ ಸಮಸಂಖ್ಯೆಯ ಅಧಿಸೂಚನೆಯಲ್ಲಿನ 2ನೇ ಸಾಲಿನಲ್ಲಿ ನಮೂದಿಸಿರುವ ಎಸ್.ಸಿ. ಸಂಖ್ಯೆ. 93:2003 ಎಂಬುದರ ಬದಲಾಗಿ ಎಸ್.ಸಿ.ಸಂಖ್ಯೆ.94:2003 ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಗುಂಡೂರಾವ್**

ಪಿ.ಆರ್. 600

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾ. ಮತ್ತು ಸು. ಮತ್ತು ಅಭಿಯೋಗಗಳು).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ) ಹಾಗೂ ಡಿಆರ್‌ಡಿಎ ಆಡಳಿತ ಕಾರ್ಯಕ್ರಮಗಳನ್ನು 2005-2006ನೇ ಸಾಲಿನಲ್ಲಿ ಮುಂದುವರೆಸುವ ಬಗ್ಗೆ.

**ಉಲ್ಲೇಖ:** ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆಯ ಮುಂದುವರೆದ ಯೋಜನೆಗಳನ್ನು ಮುಂದುವರೆಸುವ ಬಗ್ಗೆ ದಿನಾಂಕ: 11.04.2005 ರಂದು ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಚರ್ಚಿಸಿದ ರೀತ್ಯಾ.

**ಪ್ರಸ್ತಾವನೆ:**

ಉಲ್ಲೇಖದಲ್ಲಿ ದಿನಾಂಕ: 11.04.2005 ರಂದು ಸರ್ಕಾರದ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಯೋಜನೆಗಳನ್ನು 2005-2006ನೇ ಸಾಲಿಗೆ ಮುಂದುವರೆಸುವ ಬಗ್ಗೆ ಸಂಬಂಧಪಟ್ಟ ನಿರ್ದೇಶಕರೊಂದಿಗೆ ಚರ್ಚಿಸಲಾಯಿತು. ಈ ಸಂಬಂಧದಲ್ಲಿ 2004-2005ನೇ ಸಾಲಿನಲ್ಲಿ ಅನುಷ್ಠಾನಗೊಂಡ ಎಲ್ಲಾ ಕಾರ್ಯಕ್ರಮಗಳನ್ನು 2005-2006ನೇ ಸಾಲಿಗೆ ಮುಂದುವರೆಸಿ ಅನುಷ್ಠಾನಗೊಳಿಸಬೇಕೆಂದು ತೀರ್ಮಾನಿಸಿರುವ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 115 ಸ್ವಜಯೋ 2005, ಬೆಂಗಳೂರು, ದಿನಾಂಕ: 13ನೇ ಏಪ್ರಿಲ್ 2005**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಕರ್ನಾಟಕ ಸರ್ಕಾರವು ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ ಹಾಗೂ ಡಿಆರ್‌ಡಿಎ (ಆಡಳಿತ) ಕಾರ್ಯಕ್ರಮಗಳನ್ನು 2005-2006ನೇ ಸಾಲಿಗೆ ಕೇಂದ್ರ ಸರ್ಕಾರವು ಈ ಯೋಜನೆಗೆ ನಿಗದಿಪಡಿಸಬಹುದಾದ ಅನುದಾನ ಹಾಗೂ ವಿಧಿಸಬಹುದಾದ ಷರತ್ತುಗಳಿಗೆ ಒಳಪಟ್ಟು 2005-2006ನೇ ಸಾಲಿಗೆ ಮುಂದುವರೆಸಿದೆ.

2005-2006ನೇ ಸಾಲಿನಲ್ಲಿ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ ಹಾಗೂ ಡಿಆರ್‌ಡಿಎ (ಆಡಳಿತ) ಕಾರ್ಯಕ್ರಮಗಳನ್ನು ಈ ಕೆಳಕಂಡ ಲೆಕ್ಕ ಶೀರ್ಷಿಕೆಯಲ್ಲಿ ಭರಿಸತಕ್ಕದ್ದು.

**ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ ಲೆಕ್ಕ ಶೀರ್ಷಿಕೆ** "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು-198-ಗ್ರಾಮ ಪಂಚಾಯತಿಗಳಿಗೆ ಸಹಾಯ-1 ಗ್ರಾಮ ಪಂಚಾಯತಿಗಳು-01-ಬ್ಲಾಕ್ ಅನುದಾನ (ಯೋಜನೆ) (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ)-2005-2006 (2501-01-198-1-01) ರಡಿ ಭರಿಸತಕ್ಕದ್ದು."

**ಡಿಆರ್‌ಡಿಎ ಆಡಳಿತ ವೆಚ್ಚ ಲೆಕ್ಕ ಶೀರ್ಷಿಕೆ** "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00-196-ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ-1-ಜಿಲ್ಲಾ ಪಂಚಾಯತ್‌ಗಳು-06-ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ-(ಯೋಜನೆ)-2005-2006 ಅಡಿ ಭರಿಸತಕ್ಕದ್ದು (2515-00-196-1-06-06)"

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಬಿ. ಹಿರೇಮಣಿಯವರ್**

ಪಿ.ಆರ್. 535

ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** ಅಕ್ಷರ ದಾಸೋಹ ಕಾರ್ಯಕ್ರಮದ ಮೌಲ್ಯಮಾಪನ-ಸೇವಾ ವೆಚ್ಚವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಡಿ 163 ಎಂಎಂಎಸ್ 2004, ದಿನಾಂಕ: 23.11.2004.
2) ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಎಂ3:ಅ.ದಾ:ಮೌಲ್ಯಮಾಪನ 19:03, ದಿನಾಂಕ: 1.3.2005.

**ಪ್ರಸ್ತಾವನೆ:**

ರಾಜ್ಯದಲ್ಲಿ ಜಾರಿಯಲ್ಲಿರುವ ಮಧ್ಯಾಹ್ನದ ಬಿಸಿಊಟ ಯೋಜನೆ ಅಕ್ಷರ ದಾಸೋಹ ಕಾರ್ಯಕ್ರಮದ ಮೌಲ್ಯಮಾಪನ ಕಾರ್ಯಕ್ಕಾಗಿ ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರೂ.17.50 ಲಕ್ಷ ರೂ.ಗಳನ್ನು ಬಿಡುಗಡೆ ಮಾಡಲಾಗಿತ್ತು. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರು ಮೇಲೆ (2) ರಲ್ಲಿ ಓದಲಾದ ದಿನಾಂಕ: 1.3.2005ರ ತಮ್ಮ ಪತ್ರದಲ್ಲಿ ಬಿಡುಗಡೆ ಮಾಡಲಾದ ಸೇವಾ ಶುಲ್ಕವನ್ನು ಸರ್ಕಾರಕ್ಕೆ ಪಾವತಿಸಬೇಕಿರುವುದರಿಂದ ಮತ್ತೆ 1.84 ಲಕ್ಷ ರೂ.ಗಳನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 163 ಎಂಎಂಎಸ್ 2004, ಬೆಂಗಳೂರು, ದಿನಾಂಕ: 1ನೇ ಏಪ್ರಿಲ್ 2005**
**(ಇಡಿ 03 ಸ್ವೀಮರ (ಯೂನಿಕ್) 2005, ದಿನಾಂಕ: 01.04.2005)**

ಸರ್ಕಾರವು ಅಕ್ಷರ ದಾಸೋಹ ಕಾರ್ಯಕ್ರಮದ ಮೌಲ್ಯಮಾಪನಕ್ಕಾಗಿ ವೆಚ್ಚವಾಗುವ ರೂ.17.50 ಲಕ್ಷ ರೂ.ಗಳಿಗೆ ಸೇವಾಶುಲ್ಕವನ್ನು ಪಾವತಿಸುವ ಸಲುವಾಗಿ ರೂ.1.84 ಲಕ್ಷಗಳನ್ನು (ಒಂದು ಲಕ್ಷ ಎಂಬತ್ತ ನಾಲ್ಕು ರೂಪಾಯಿಗಳು ಮಾತ್ರ) ಬಿಡುಗಡೆ ಮಾಡುತ್ತದೆ. ಈ ವೆಚ್ಚವನ್ನು ಅಕ್ಷರ ದಾಸೋಹ ಕಾರ್ಯಕ್ರಮಕ್ಕಾಗಿ 2004-05ನೇ ಸಾಲಿನಲ್ಲಿ ಮೀಸಲಾದ ಹಣದಲ್ಲೇ ಭರಿಸತಕ್ಕದ್ದು.

ಆಂತರಿಕ ಆರ್ಥಿಕ ಸಲಹೆಗಾರರು, ಶಿಕ್ಷಣ ಇಲಾಖೆ ಅವರ ಸಹಮತಿಯನ್ನು ಅ.ಟಿ. ಸಂಖ್ಯೆ: ಶಿಇ 270 ಐಎಫ್ (ಬಿಎ) 2005, ದಿನಾಂಕ: 22.3.2005 ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್. 601

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ.-

**EDUCATION SECRETARIAT**

**CORRIGENDUM**

**No. ED 202 YOSAKA 2002, Bangalore, Dated: 30th March 2005**

In Government Order No. ED 202 YOSAKA 2002, dated: 28.3.2005 for the words appearing as "The said amount is released immediately through the Director, Urdu and Other Minority Languages Institution, Department of Public Instruction to the concerned DIET's of the State" in para 2 of order portion the following shall be substituted with effect from 28.3.2005

"The said amount is released immediately through the Director, Urdu and Other Minority Languages Institution, Department of Public Instruction to the concerned DDPI's of the State"

By Order and in the Name of the Governor of Karnataka,

**K. SRIKANTESHWARA**

P.R. 603

Special Officer & Ex-Officio

Deputy Secretary to Government (Planning), Education Department.

**ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ**

**ವಿಷಯ:** ರಾಜ್ಯದಲ್ಲಿ ಹಳದಿ ಪಡಿತರ ಚೀಟಿ ಯೋಜನೆಯನ್ನು ಅನುಷ್ಠಾನಗೊಳಿಸುವ ಕುರಿತು - 2005ನೇ ಸಾಲಿನಲ್ಲಿ ಬೆಂಗಳೂರು ಅನೌಪಚಾರಿಕ ಪಡಿತರ ಪ್ರದೇಶದಲ್ಲಿ ಪಡಿತರ ಚೀಟಿ ಫಲಾನುಭವಿಗಳ ಸಮೀಕ್ಷೆ ಕೈಗೊಳ್ಳಲು ಅನುಸರಿಸಬೇಕಾದ ಕ್ರಮಗಳ ಕುರಿತು - ಅನುಮೋದನೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಆನಾಸ 114 ಡಿಆರ್‌ಎ 2004, ದಿನಾಂಕ: 10.1.2005.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯದಲ್ಲಿ ಹಳದಿ ಪಡಿತರ ಚೀಟಿ ಯೋಜನೆಯು ದಿನಾಂಕ: 1.11.2003 ರಿಂದ ಜಾರಿಗೆ ಬಂದಿರುತ್ತದೆ. ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳನ್ನು ಗುರುತಿಸಿ, ಈ ಪಡಿತರ ಚೀಟಿಯನ್ನು ವಿತರಿಸುವಲ್ಲಿ ಕೆಲವು ಅರ್ಹ ಕುಟುಂಬಗಳನ್ನು ಕೈಬಿಟ್ಟಿದ್ದು, ಅನರ್ಹ ಕುಟುಂಬಗಳು ಪಡಿತರ ಚೀಟಿಯನ್ನು ಹೊಂದಿರುವುದಾಗಿ ಸಾರ್ವಜನಿಕರಿಂದ / ಜನಪ್ರತಿನಿಧಿಗಳಿಂದ ದೂರುಗಳು ಬಂದಿರುವುದನ್ನು ಗಮನಿಸಿ ಗ್ರಾಮ ಹಾಗೂ ಪಟ್ಟಣ ಪ್ರದೇಶದ ವಾರ್ಡುಗಳಲ್ಲಿ ಪಾರದರ್ಶಕ ರೀತಿಯಲ್ಲಿ ಪುನರ್ ಮನೆ ಮನೆ ಸಮೀಕ್ಷೆ ನಡೆಸಲು ಮೇಲೆ ಓದಲಾದ (1)ರ ಆದೇಶದಲ್ಲಿ ನಿರ್ದಿಷ್ಟ ಮಾನದಂಡಗಳನ್ನು ರೂಪಿಸಿ ಆದೇಶವನ್ನು ಹೊರಡಿಸಿದೆ.

ಬೆಂಗಳೂರು ಅನೌಪಚಾರಿಕ ಪಡಿತರ ಪ್ರದೇಶಕ್ಕೆ ಸಂಬಂಧಿಸಿದಂತೆ, ಮನೆ ಮನೆ ಸಮೀಕ್ಷೆ ಮಾಡುವ ಬಗ್ಗೆ ನಗರದ ಮಾನ್ಯ ಸಂಸತ್ ಸದಸ್ಯರು/ವಿಧಾನಸಭಾ/ವಿಧಾನ ಪರಿಷತ್‌ನ ಶಾಸಕರುಗಳ ವಿಶೇಷ ಸಭೆಯನ್ನು ದಿನಾಂಕ: 2.4.2005 ರಂದು ಮಾನ್ಯ ಆಹಾರ ಮತ್ತು ನಾಗರೀಕ ಸರಬರಾಜು ಸಚಿವರ ಅಧ್ಯಕ್ಷತೆಯಲ್ಲಿ ಸಭೆ ನಡೆದಿದ್ದು, ಸುದೀರ್ಘವಾಗಿ ಈ ವಿಷಯದ ಬಗ್ಗೆ ಚರ್ಚಿಸಲಾಗಿದೆ.

ಬೆಂಗಳೂರು ಅನೌಪಚಾರಿಕ ಪಡಿತರ ಪ್ರದೇಶದಲ್ಲಿ ಈ ಹಿಂದೆ 2002-03 ರಲ್ಲಿ ಘೋಷಿತ ಮತ್ತು ಅಘೋಷಿತ ಕೊಳಚೆ ಪ್ರದೇಶಗಳ ಮನೆ ಮನೆ ಸಮೀಕ್ಷೆಯನ್ನು ಮಾಡಲಾಗಿತ್ತು. ತದನಂತರ ನಗರದ ಉಳಿದ ಎಲ್ಲಾ ಭಾಗಗಳಲ್ಲಿರುವ ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳನ್ನು ಸಹ ಗುರುತಿಸಿ ಸಮೀಕ್ಷೆಯನ್ನು ಪರಿಣಾಮಕಾರಿಯಾಗಿ ಮಾಡಿ, ಭಾವಚಿತ್ರದೊಂದಿಗೆ ಗಣಕೀಕರಣಗೊಳಿಸಿದ ಪಡಿತರಚೀಟಿಗಳನ್ನು ಈಗಾಗಲೇ ವಿತರಿಸಲಾಗಿದೆ.

2001ನೇ ಜನ ಗಣತಿ ಪ್ರಕಾರ ಇರುವ ಕುಟುಂಬಗಳ ಸಂಖ್ಯೆ ಚಾಲ್ತಿಯಲ್ಲಿರುವ ಬಿಪಿಎಲ್ ಪಡಿತರ ಚೀಟಿಗಳ ಸಂಖ್ಯೆಯನ್ನು ಹೋಲಿಸಿದಾಗ ಶೇಕಡಾವಾರು ಪ್ರಮಾಣ 20 ಕ್ಕಿಂತ ಕಡಿಮೆಯಿರುತ್ತದೆ. ಈ ಹಿನ್ನೆಲೆಯಲ್ಲಿ ನಗರದ ಅನೌಪಚಾರಿಕ ಪಡಿತರ ಪ್ರದೇಶದ ಸಂಪೂರ್ಣ ಸಮೀಕ್ಷೆಯ ಅಗತ್ಯತೆ ಇಲ್ಲವೆಂದು, ಕೇವಲ ಕೆಲವು ನಿರ್ದಿಷ್ಟ ಪ್ರದೇಶಗಳಲ್ಲಿ ಮನೆ ಮನೆ ಪುನರ್ ಸಮೀಕ್ಷೆಯನ್ನು ಕೈಗೊಳ್ಳುವುದು ಸಮಂಜಸವೆಂಬ ಒಮ್ಮತದ ಅಭಿಪ್ರಾಯ ಬಂದಿದ್ದರ ಹಿನ್ನೆಲೆಯಲ್ಲಿ ಇಂತಹ ನಿರ್ದಿಷ್ಟ ಪ್ರದೇಶವನ್ನು ನಿಖರವಾಗಿ ಗುರುತಿಸಿ ತಿಳಿಸಲು ಆಯಾ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ, ಆಯಾ ವಿಧಾನಸಭಾ ಶಾಸಕರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಿ ಈ ಸಮಿತಿಗೆ ನಿಖರವಾದ ಪ್ರದೇಶವನ್ನು ಸೂಚಿಸಲು ಅಧಿಕಾರ ನೀಡಬೇಕೆಂದು ಅಭಿಪ್ರಾಯ ಪಡಲಾಯಿತು. ಅಲ್ಲದೆ ಇಂತಹ ಕುಟುಂಬಗಳನ್ನು ಗುರುತಿಸುವಾಗ ಕುಟುಂಬದ ಆದಾಯ ಪ್ರಮಾಣಪತ್ರವನ್ನು ಹಾಗೂ ಕುಟುಂಬದ ವಾಸ್ತವ್ಯದ ಬಗ್ಗೆ ದಾಖಲಾತಿಗಳನ್ನು ಕಡ್ಡಾಯ ಮಾಡಬಾರದೆಂದು ತೀರ್ಮಾನಿಸಲಾಯಿತು.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 114 ಡಿಆರ್‌ಎ 2004 (ಭಾಗ-6), ಬೆಂಗಳೂರು, ದಿನಾಂಕ: 18ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಬೆಂಗಳೂರು ಅನೌಪಚಾರಿಕ ಪಡಿತರ ಪ್ರದೇಶದಲ್ಲಿ ಮನೆ ಮನೆ ಪುನರ್ ಸಮೀಕ್ಷಾ ಕಾರ್ಯದಲ್ಲಿ ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳನ್ನು ಗುರುತಿಸಲು ಈ ಕೆಳಕಂಡ ನಿರ್ದಿಷ್ಟ ಮಾನದಂಡಗಳಿಗೆ ಒಳಪಡುವ ಕುಟುಂಬಗಳು ಬಿಪಿಎಲ್ ಪಡಿತರ ಚೀಟಿಗೆ ಅರ್ಹರಿರುವುದಿಲ್ಲ.

(1) ಎರಡು ಹೆಕ್ಟೇರ್ ಅಥವಾ ಅದಕ್ಕಿಂತ ಹೆಚ್ಚು ಭೂಮಿ ಹೊಂದಿರುವವರು;

(2) ದೂರವಾಣಿ ಹಾಗೂ ಸೆಲ್‌ಫೋನ್ ಹೊಂದಿರುವವರು;

(3) ಸ್ವಂತವಾಗಿ ಯಾರೇ ಡೀಸಲ್/ಪೆಟ್ರೋಲ್ ಇಂಧನ ಬಳಸುವ ವಾಹನ ಹೊಂದಿರುವವರು;

(4) ಬ್ಯಾಂಕ್/ಸಹಕಾರಿ ಸಂಘಗಳಲ್ಲಿ 1.00 ಲಕ್ಷಕ್ಕೂ ಮೇಲ್ಪಟ್ಟು ಸಾಲ ಪಡೆದಿರುವವರು;

(5) ಒಂದು ಬೋರ್‌ವೆಲ್ ಹೊಂದಿ, ನೀರಾವರಿ ಸೌಕರ್ಯ ಪಡೆಯುತ್ತಿರುವವರು;

(6) ತಿಂಗಳಿಗೆ ರೂ.1,000/- ಕ್ಕೆ ಕಡಿಮೆ ಇಲ್ಲದೆ ವೇತನ ಪಡೆಯುವ ಸರ್ಕಾರಿ/ಸರ್ಕಾರೇತರ/ಖಾಸಗಿ ಸಿಬ್ಬಂದಿಗಳು;

(7) ಆದಾಯ ತೆರಿಗೆ ಪಾವತಿಸುವವರು;

(8) Registered contractors, APMC Traders/Commission Agents/Dealers in Seeds/Fertilizers, etc.

(9) 20'X30' ಚದರ ಅಡಿ ಅದಕ್ಕೆ ಅಥವಾ ಅದಕ್ಕಿಂತ ಕಡಿಮೆ ಅಳತೆಯುಳ್ಳ ನಿವೇಶನ ಅಥವಾ ಸರ್ಕಾರದ ಯಾವುದೇ ಗೃಹ ನಿರ್ಮಾಣ ಯೋಜನೆಯಡಿಯಲ್ಲಿ ಉಚಿತವಾಗಿ ಮನೆ ನೀಡಿರುವ ಕುಟುಂಬಗಳನ್ನು ಬಿಪಿಎಲ್‌ಗೆ ಒಳಪಟ್ಟಿರುವವರು ಎಂದು ಪರಿಗಣಿಸುವುದು.

(10) ರಸ್ತೆ ಬದಿಯಲ್ಲಿ ಹಾಗೂ ಸಣ್ಣ ಪ್ರಮಾಣದ ಪೆಟ್ಟಿಗೆ ಅಂಗಡಿಗಳನ್ನು ಇಟ್ಟುಕೊಂಡು ಜೀವನೋಪಾಯಕ್ಕಾಗಿ ವ್ಯವಹಾರ ಮಾಡುತ್ತಿರುವವರನ್ನು ಹೊರತುಪಡಿಸಿ, ಉಳಿದ ಸ್ವಂತ ಅಥವಾ ಬಾಡಿಗೆ ಅಂಗಡಿಗಳಲ್ಲಿ ವ್ಯಾಪಾರ ನಡೆಸುತ್ತಾ ಇರುವವರು ಎಪಿಎಲ್ ಅಥವಾ ಗೌರವಾನ್ವಿತ ಪಡಿತರ ಚೀಟಿಗೆ ಅರ್ಹರಿರುವವರು.

(11) ವಾಸದ/ವಾಣಿಜ್ಯ ಉದ್ದೇಶಕ್ಕಾಗಿ ನೀಡಲಾಗಿರುವ ಅಥವಾ ಪಡೆಯಲಾಗಿರುವ ಕಟ್ಟಡಗಳಿಂದ ಬರುವ ಬಾಡಿಗೆ ಮಾಸಿಕ ರೂಪಾಯಿ 2000 ಮೀರುವವರು ಬಿಪಿಎಲ್ ಪಡಿತರ ಚೀಟಿಗೆ ಅರ್ಹರಿರುವುದಿಲ್ಲ.

ಒಟ್ಟಾರೆ ಸಮೀಕ್ಷೆ ಮಾಡುವ ಸಂದರ್ಭದಲ್ಲಿ ಕುಟುಂಬದ ಜೀವನಮಟ್ಟವನ್ನೂ ಕೂಡ ಸಮೀಕ್ಷೆ ಮಾಡಿ ನಿರ್ಣಯಿಸುವುದು.

ಕುಟುಂಬದ ವಾಸ್ತವ್ಯದ ಬಗ್ಗೆ ದಾಖಲಾತಿಗಳನ್ನು ಗುರುತಿಸುವ ಏಕೈಕ ಮಾರ್ಗವೆಂದರೆ ಪ್ರಜಾಪ್ರತಿನಿಧಿ ಕಾಯ್ದೆ 1950 ರಲ್ಲಿ ವಿವರಿಸಲಾಗಿರುವ "ಸಾಮಾನ್ಯ ನಿವಾಸಿ" ಎಂದು ಅರ್ಥೈಸಿ ಗುರುತಿಸಬಹುದು.

ಬೆಂಗಳೂರು ನಗರ ಅನೌಪಚಾರಿಕ ಪಡಿತರ ಪ್ರದೇಶಕ್ಕೆ ಸಂಬಂಧಿಸಿದಂತೆ, ಮನೆ ಮನೆ ಪುನರ್ ಸಮೀಕ್ಷೆ ಭಾಗಶಃ ಅಂದರೆ, ಮಾನ್ಯ ವಿಧಾನಸಭಾ ಸದಸ್ಯರ ಅಧ್ಯಕ್ಷತೆಯಲ್ಲಿರುವ ಈ ಕೆಳಕಂಡ ಸಮಿತಿಯು ನೀಡಿರುವ ನಿಖರವಾದ ಚಕ್ಕುಬಂದಿಯೊಂದಿಗೆ ನೀಡುವ ಪ್ರದೇಶಕ್ಕೆ ಮಾತ್ರ ಸೀಮಿತಗೊಂಡಂತೆ ಮನೆ ಮನೆ ಪುನರ್ ಸಮೀಕ್ಷೆಯನ್ನು ಮಾಡತಕ್ಕದ್ದು. ಸಮೀಕ್ಷೆಯನ್ನು ವಾರ್ಡ್ ಮಟ್ಟದಲ್ಲಿ ಅಧಿಕಾರಿಗಳ ತಂಡ ರಚಿಸಿ, ಸ್ಥಳೀಯ ಸಂಘ ಸಂಸ್ಥೆಗಳ ಸಹಕಾರದೊಡನೆ ಸ್ಥಳೀಯ ಚುನಾಯಿತ ಪ್ರತಿನಿಧಿಗಳ ಸಮ್ಮುಖದಲ್ಲಿ ಅಗತ್ಯ ಪ್ರಚಾರದೊಡನೆ ಈ ಸಮೀಕ್ಷೆಯು ದಿನಾಂಕ: 2.5.2005 ರಿಂದ ಪ್ರಾರಂಭಗೊಂಡು ದಿನಾಂಕ: 31.5.2005ಕ್ಕೆ ಮುಕ್ತಾಯಗೊಳ್ಳತಕ್ಕದ್ದು.

**ವಿಧಾನಸಭಾ ಕ್ಷೇತ್ರದ ಸಮಿತಿ**

| | | |
|---|---|---|
| 1 | ಆಯಾ ಕ್ಷೇತ್ರದ ವಿಧಾನ ಸಭಾ ಸದಸ್ಯರು | ಅಧ್ಯಕ್ಷರು |
| 2 | ಆಯಾ ಕ್ಷೇತ್ರದ ಲೋಕ ಸಭಾ ಸದಸ್ಯರು | ಸದಸ್ಯರು |
| 3 | ಆಯಾ ಕ್ಷೇತ್ರದ ರಾಜ್ಯ ಸಭಾ ಸದಸ್ಯರು | ಸದಸ್ಯರು |
| 4 | ಆಯಾ ಕ್ಷೇತ್ರದ ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| 5 | ಆಯಾ ಪ್ರದೇಶದ ನಗರಪಾಲಿಕೆಯ ಕಾರ್ಪೋರೇಟರ್ | ಸದಸ್ಯರು |
| 6 | ಆಯಾ ಪ್ರದೇಶದ ನಗರ/ಪುರ ಸಭಾ ಕೌನ್ಸಿಲರ್ | ಸದಸ್ಯರು |
| 7 | ಕೊಳಚೆ ನಿರ್ಮೂಲನಾ ಮಂಡಳಿಯ ಆಯುಕ್ತರ ಪ್ರತಿನಿಧಿ | ಸದಸ್ಯರು |
| 8 | ಆಯಾ ಪ್ರದೇಶದ ನಗರ ಸಭಾ ಆಯುಕ್ತರು | ಸದಸ್ಯರು |
| 9 | ಆಯಾ ಕ್ಷೇತ್ರದ ಮಹಾನಗರ ಪಾಲಿಕೆಯ ಕಂದಾಯಾಧಿಕಾರಿ | ಸದಸ್ಯರು |
| 10 | ಆಯಾ ಕ್ಷೇತ್ರದ ಎಸ್.ಜೆ.ಆರ್.ವೈ. ಯೋಜನೆಯ ಕನ್ವಿನರ್ | ಸದಸ್ಯರು |
| 11 | ಸ್ಥಳೀಯ ಎರಡು ಸಂಘ ಸಂಸ್ಥೆಗಳು (ಎನ್.ಜಿ.ಓ.) | ಸದಸ್ಯರು |
| 12 | ಸಂಬಂಧಿಸಿದ ಆಹಾರ ಇಲಾಖೆಯ ಉಪನಿರ್ದೇಶಕರು | ಸದಸ್ಯ ಕಾರ್ಯದರ್ಶಿ |

ಮೇಲ್ಕಂಡ ಸಮಿತಿಯು ಸೂಚಿಸಿರುವ ನಿಖರವಾದ ಪ್ರದೇಶಗಳಿಗೆ ಹೊರತುಪಡಿಸಿ ಉಳಿದಿರುವ ಪ್ರದೇಶಗಳಲ್ಲಿ ಇರುವ ಅನರ್ಹ ಬಿಪಿಎಲ್ ಪಡಿತರ ಚೀಟಿಗಳನ್ನು ಮತ್ತು ವಲಸೆ ಹೋಗಿರುವ ಕುಟುಂಬಗಳ ಪಡಿತರ ಚೀಟಿಗಳನ್ನು ಪತ್ತೆಹಚ್ಚಿ ರದ್ದುಪಡಿಸಲು ಸಮೀಕ್ಷಾ ತಂಡವು ಶಿಫಾರಸ್ಸು ಮಾಡತಕ್ಕದ್ದು. ಹಾಗೂ ಈ ರೀತಿ ಶಿಫಾರಸ್ಸು ಮಾಡಿರುವ ಸಂಖ್ಯೆಗೆ ಮೀರದಂತೆ ಮೇಲೆ ಸೂಚಿಸಿದ ಮಾನದಂಡಗಳಂತೆ ಅರ್ಹ ಬಿಪಿಎಲ್ ಕುಟುಂಬಗಳನ್ನು ಗುರುತಿಸಿ, ಈಗಾಗಲೇ ನಿಗದಿಪಡಿಸಿರುವ ಅರ್ಜಿಯಲ್ಲಿ ಮಾಹಿತಿಯನ್ನು ಪಡೆಯುವುದು.

ಸಮೀಕ್ಷೆಯನ್ನು ದಿನಾಂಕ: 2.5.2005 ರಿಂದ ಪ್ರಾರಂಭಿಸಬೇಕಾಗಿರುವುದರಿಂದ ಕ್ಷೇತ್ರವಾರು ಶಾಸಕರ ಅಧ್ಯಕ್ಷತೆಯಲ್ಲಿ ದಿನಾಂಕ: 20.5.2005 ರೊಳಗೆ ಪ್ರಥಮ ಸಭೆಯನ್ನು ನಡೆಸತಕ್ಕದ್ದು. ಪ್ರದೇಶವಾರು ಗುರುತಿಸುವ ಪಟ್ಟಿಯಲ್ಲಿರುವ ಕುಟುಂಬಗಳಿಗೆ ಮನೆ ಸಂಖ್ಯೆಯನ್ನು ನೀಡುವ ಕಾರ್ಯವನ್ನು ಏಪ್ರಿಲ್ ಅಂತ್ಯದೊಳಗೆ ಸಂಪೂರ್ಣಗೊಳಿಸುವುದು.

ಅನೌಪಚಾರಿಕ ಪಡಿತರ ಪ್ರದೇಶದಲ್ಲಿ ಈಪುನರ್ ಸಮೀಕ್ಷೆಯನ್ನು ಬಿಪಿಎಲ್ ಕುಟುಂಬಗಳಿಗೆ ಮಾತ್ರ ಕೈಗೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ.ಹ. ಕಳ್ಳಿ**

ಪಿ.ಆರ್. 604 ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರಭಾರ)

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

**ತಿದ್ದುಪಡಿ ಸಂಖ್ಯೆ: ಆನಾಸ 24 ಕಾಮಾಸೇ 2005, ಬೆಂಗಳೂರು, ದಿನಾಂಕ: 30ನೇ ಏಪ್ರಿಲ್ 2005**

ಅಧಿಸೂಚನೆ ಸಂಖ್ಯೆ: ಆನಾಸ 24 ಕಾಮಾಸೇ 2005, ದಿನಾಂಕ: 29.4.2005ರ 2ನೇ ಪ್ಯಾರಾದಲ್ಲಿರುವ "ಶ್ರೀ ಮಹಮ್ಮದ್ ಜಹಾಂಗೀರ್, ಉಪನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ", ಎಂಬುದಕ್ಕೆ ಬದಲಾಗಿ "ಶ್ರೀ ಸಿ.ಎಂ. ಮಲ್ಲಿಕಾರ್ಜುನ, ಉಪನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಬೆಂಗಳೂರು ವಿಭಾಗ", ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ವಿಶ್ವೇಶ್ವರಯ್ಯ**

ಪಿ.ಆರ್. 633 ಪೀಠಾಧಿಕಾರಿ, ಆಹಾರ-1 ಶಾಖೆ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.